# ಸಂಚಯ ಗ್ಯಾಲರಿ



ವಾಮನಾವತಾರ, ಬಲಿ, ಶುಕ್ರಾಚಾರ್ಯ
ಕಲಾವಿದ - ತಿಪ್ಪಾಜಪ್ಪ (1780-1856)
ಕೃಪೆ : ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಪ್ರಕಟಣೆ



ಸಂಚಯ
ಸಾಂಸ್ಕೃತಿಕ ಪತ್ರಿಕೆ
ತ್ರೈಮಾಸಿಕ

---

ಸಂಪುಟ: ೧೨
ಸಂಚಿಕೆ: (೪) ೬೧
ಆಗಸ್ಟ್ ೨೦೦೩

---

ಸಂಪಾದಕ:
ಡಿ.ವಿ. ಪ್ರಹ್ಲಾದ್

---

ಚಂದಾ ವಿವರ
ವಾರ್ಷಿಕ ಚಂದಾ: ರೂ. ೧೦೦/-
ಎರಡು ವರ್ಷ: ರೂ. ೨೦೦/-
ಐದು ವರ್ಷ: ರೂ. ೫೦೦/-

---

ಮುಖಪುಟ:
ಆದಿಮೂಲಂ, ಎಸ್.ಜಿ. ವಾಸುದೇವ್
ಅವರ ರೇಖಾಚಿತ್ರಗಳು

---

ಸಂಪರ್ಕ ವಿಳಾಸ:
ನಂ. ೧೦೦, ೨ನೇ ಮುಖ್ಯ ರಸ್ತೆ
೬ನೇ ಬ್ಲಾಕ್, ೩ನೇ ಹಂತ,
೩ನೇ ಘಟ್ಟ, ಬನಶಂಕರಿ
ಬೆಂಗಳೂರು-೫೬೦ ೦೮೫.
ದೂರವಾಣಿ: ೦೮೦-೬೭೯ ೧೯೨೫

ತರ್ಕಿಸಿದ ಕಲ್ಪನೆಯ ದಿಟವೆಂದು ನಂಬುವರೆ
ತರ್ಕಕ್ಕೆ ನಿಷ್ಠೆಯಾ ನೆಲೆಯೆ ಇಲ್ಲ!
ತರ್ಕಕ್ಕೆ ಹೊಸತರ್ಕ ಹೊಡೆದೋಡಿಸುವದಯ್ಯ
ತರ್ಕದಾ ಸತ್ಯಕ್ಕೆ ಮೋರೆಯಿಲ್ಲ

**- ಮಧುರಚೆನ್ನ**



## ಈ ಸಂಚಿಕೆಯಲ್ಲಿ...





# ಹೊಳೆದದ್ದೆ ತಾರೆ
# ಉಳಿದದ್ದು ಆಕಾಶ

ಪ್ರಿಯ ಓದುಗರೆ,

ಕೆ.ವಿ. ಸುಬ್ಬಣ್ಣ ಹೆಗ್ಗೋಡಿನ ಹತ್ತಿರದ 'ಹೊನ್ನೆಸರ' ಎಂಬ ಪುಟ್ಟ ಹಳ್ಳಿಯಲ್ಲಿ ಇದ್ದಾರೆ. ಈಚೆಗೆ ತೀವ್ರವಾದ ಅನಾರೋಗ್ಯ ದಿಂದ ಚೇತರಿಸಿಕೊಳ್ಳುತ್ತಿದ್ದ ಅವರನ್ನ ಕಾಣಲು ಹೋದಾಗ ಹಾರ್ದಿಕವಾಗಿ ಬರಮಾಡಿಕೊಂಡರು. ದೈಹಿಕವಾಗಿ ಸ್ವಲ್ಪ ಕುಗ್ಗಿದ ಹಾಗೆ ಕಂಡರೂ ಅದೇ ನಗುಮುಖ, ತಾಂಬುಲ ತುಂಬಿದ ಬಾಯಿ, ಮಿನುಗುವ ಕಣ್ಣು, ಜಗತ್ತು ಒಂದು 'ಗ್ಲೋಬಲ್‌ವಿಲೇಜ್' ಎನ್ನುವ ಮಾತು ಚಾಲ್ತಿಯಲ್ಲಿರುವ ಇವತ್ತಿನ ದಿನದಲ್ಲಿ ಗ್ರಾಮವೇ ಜಗತ್ತಾದ ವೈಶಿಷ್ಟ್ಯ ಹೆಗ್ಗೋಡಿನದ್ದು. ಅಲ್ಲಿನ ಎಲ್ಲ ಸಾಂಸ್ಕೃತಿಕ ಚಟುವಟಿಕೆಗಳ ಮೂಲಕ ಜಗತ್ತಿನ ಗಮನ ಸೆಳೆದ ಸುಬ್ಬಣ್ಣ ಅವರ ಮಾತುಕತೆಯಲ್ಲಿ ಹಳ್ಳಿಯವರ ಸರಳತೆ ನಿಷ್ಠುರತೆಗಳೆರಡೂ ಇದ್ದವು.

ನಮ್ಮ ಪ್ರಚಲಿತ ಬೌದ್ಧಿಕ ತೀರ್ಮಾನಗಳು ಮತ್ತು ಅಂಥಾ ತೀರ್ಮಾನಗಳನ್ನು ನಂಬಿಕೊಂಡು ನಿರ್ಮಿಸಿಕೊಳ್ಳುವ ಸರಳೀಕೃತ ಸುಳ್ಳುಗಳ ಬಗ್ಗೆ ಸುಬ್ಬಣ್ಣನವರ ಮಾತಿನ ಲಹರಿ ಹರಿಯತೊಡಗಿತ್ತು. 'ವಚನ ಸಾಹಿತ್ಯ ಸೆಕ್ಯುಲರ್ ಆದದ್ದು, ಬೌದ್ಧ ಧರ್ಮ ಶ್ರೇಷ್ಠವಾದದ್ದು ಎಂಬ ಎರಡು ತೀರ್ಮಾನ ಗಳನ್ನು ಉದಾಹರಿಸಿ ವಿವರಿಸಿದರು. ಬೆಲ್ಜಿಯಂನಲ್ಲಿ ನೆಲೆಸಿರುವ ಕನ್ನಡಿಗ ವಿದ್ವಾಂಸರೊಬ್ಬರು ವಚನ ಸಾಹಿತ್ಯದಲ್ಲಿ ಜಾತಿಯ ವಿವರ, ಉಲ್ಲೇಖಗಳು ಮತ್ತು ಜಾತಿಕೇಂದ್ರಿತ ಪರಿಕಲ್ಪನೆಗಳ ಬಗ್ಗೆ ನಡೆಸಿರುವ ಸಂಶೋಧನೆ. ಅದರ ನಿಲುವುಗಳ ಬಗ್ಗೆ ಹೇಳಿದರು. ಹಾಗೇ ಬೌದ್ಧಧರ್ಮದ ಜೀವನದ ಬಗೆಗಿನ ನಿರಾಸೆಯ ಪ್ರತಿಪಾದನೆಯೇ ಅದರ ವಿನಾಶಕ್ಕೆ ಜೀವವಿರೋಧಿಯಾದದಕ್ಕೆ ಕಾರಣವಾದದ್ದರ ಮಾತೂ ಬಂತು. ಎಂ.ಎ. ಮತ್ತೊಂದು ಓದಿಬಿಟ್ಟ ಮಾತ್ರಕ್ಕೆ ಎಲ್ಲ ವಿಚಾರಗಳ ಬಗ್ಗೆ ನಿಶ್ಚಿತ ತೀರ್ಮಾನಗಳನ್ನು ಕೊಡುವ ತೀರ್ಪುಗಾರರ ಬಗ್ಗೆ ನಿಷ್ಠುರವಾಗೇ ಹೇಳಿದರು. ಹೆಗ್ಗೋಡಿನ ಅವರ ನಾಟಕ ಶಾಲೆ, ಅದರ ಲೈಬ್ರರಿ, ರಂಗಮಂದಿರ,



'ಮಾತುಕತೆ' ಪತ್ರಿಕೆಯನ್ನು ಕುರಿತು ಹೇಳಿದರು. ಇಲ್ಲೇ ಸಂಜೆತನಕ ಇದ್ದು ಊಟಮಾಡಿಕೊಂಡು ತನ್ನ ಇತರ ಗೆಳೆಯರನ್ನೂ ಭೇಟಿಯಾಗಿ ಆಮೇಲೆ ಹೊರಡಿ ಅಂತ ಪ್ರೀತಿಪೂರ್ವಕ ಒತ್ತಾಯ ಮಾಡಿದರು. ಅವರಿಗೆ ಇನ್ನೂ ಮಾತಾಡುವ ಹುಮ್ಮಸ್ಸಿತ್ತು. ನಮಗೆ ತೊಂದರೆ ಕೊಡುತ್ತಿದ್ದೇವಾ ಅಂತ ಆತಂಕ ಇತ್ತು. ಬೆಂಗಳೂರಿಗರ ಅವಸರ ಧಾವಂತಗಳನ್ನ ಮೈಗೆ ಮೆತ್ತಿಕೊಂಡ ನಾವುಗಳು ಅಲ್ಲಿಂದ ಬೀಳ್ಕೊಂಡು ಹೆಗ್ಗೋಡಿಗೆ ಬಂದೆವು. ಅಲ್ಲಿನ ಶಿವರಾಮಕಾರಂತ ರಂಗಮಂದಿರದಲ್ಲಿ ಶೇಕ್‌ಸ್ಪಿಯರ್‌ನ 'ಮರ್ಚೆಂಟ್ ಆಫ್ ವೆನ್ನೀಸ್' ರೂಪಾಂತರ ನಾಟಕದ ದೃಶ್ಯವೊಂದರ ತಾಲೀಮು ನಡೆಯುತ್ತಿತ್ತು. ನೀನಾಸಂನ ಲೈಬ್ರರಿ ಅಲ್ಲಿನ ಪುಸ್ತಕ ಮತ್ತು ಇತರ ವಸ್ತುಗಳ ಸಂಗ್ರಹ ವೈವಿಧ್ಯ ಖುಷಿ ಕೊಟ್ಟವು. ಎಲ್ಲದರ ಹಿಂದೆ ಅದನ್ನ ರೂಪಿಸಿದವರ ಶ್ರಮ ಅಭಿರುಚಿ ಅಚ್ಚುಕಟ್ಟುತನ ಎದ್ದು ಕಾಣುತ್ತಿತ್ತು.

ಇಲ್ಲಿ ಬೆಂಗಳೂರಿನ ಜಂಗುಳಿಯಲ್ಲಿ ಸಾಲು ಸಾಲು ವಾಹನಗಳ ಸದ್ದು ಸಮುದ್ರ ಈ ಶಬ್ಧ ಸಾಗರದ ಮಧ್ಯೆ ಹೆಗ್ಗೋಡಿನ ಮೌನವನ್ನ ಮಾನಸಿಕ ಬಿಡುವನ್ನ ಮತ್ತು ಅದನ್ನ ರೂಪಿಸಿದ ಏಕಾಗ್ರತೆಯನ್ನು ಮತ್ತೆ ಮತ್ತೆ ಧ್ಯಾನಿಸತೊಡಗಿದೆ.

ನಿಮ್ಮ
ಸಂಪಾದಕ

---

ಶ್ರದ್ಧಾಂಜಲಿ

ನಮ್ಮನ್ನಗಲಿದ

**ಕೀರ್ತಿನಾಥ ಕುರ್ತುಕೋಟಿ**

ಮತ್ತು

ಎ.ಎಸ್. ಮೂರ್ತಿರಾವ್

ಅವರಿಗೆ

---

## ಮಳೆ

ಇವ
ಸೂರ್ಯನಲ್ಲ ಸೂರ್ಯಕಾಂತಿ
ಅರೆಗಣ್ಣಿಗೆ
ತಿರುಗುವ ಹಳದಿಯ ಗಾಲಿ
ಕುಕ್ಕುವ ಚಿನ್ನದ
ಮೊನೆ ಬೀಜದ
ಮುಳ್ ಗೊನೆ
ಖಡಕ್ಕನೊಡೆಯಿತು
ಎಲೆಯೇ ಇಲ್ಲದ
ನೋವಿನ ರೆಂಬೆಯ
ಬೆಳಕಿನ ವಂಕಿ

ಹಗಲ್ ಮುಳ್ ಒತ್ತಿದ
ಮುಗಿಲ್ ಕಣ್ ಅತ್ತಿತು
ಕಣ್ಣೆವೆ ಗಾಜೊಡೆದು

ಕಿಟಕಿಯ ಕಣ್ಣಲಿ
ತಂಗಿತು, ಹಳೆ ಹಗಲಿನ ಮಳೆ
ಬೀದಿಯ ಕರಿ ಹೊಳೆ
ಕುದಿ ಕುದಿದಾರಿದ
ಕಾರ್ ಮೀನ್ ಹಾರಿದ
ಕನ್ನಡಿ ಗತ್ತಲೆ



ಎ.ಕೆ. ರಾಮಾನುಜನ್
(ಅಪ್ರಕಟಿತ ಕವಿತೆ, ೧೯೫೮)
ಕೃಪೆ: ಸುಮತೀಂದ್ರ ನಾಡಿಗ್

# ಅತಿಥಿ

ಮಹಾಬಲಮೂರ್ತಿ ಕೊಡ್ಲೇಕೆರೆ

ಆ ದೂರದಿಂದ ಮಾವ
ಕಂಸ ಕಳಿಸಿದ್ದ ಬಿಲ್ಲು
ಹಬ್ಬಕ್ಕೆ ಮಕ್ಕಳನ್ನು ಕರೆದು ತಾರೆಂದು
ದಾರಿಯಿಡೀ ಸಂಘರ್ಷ
ಒಳಗುದಿ ಬೆವರು
ಅಕ್ರೂರ ಕೃಷ್ಣನ ಅತಿಥಿ

ಥಟ್ಟಂತ ದರ್ಶನ ಕೊಟ್ಟು
ನೊರೆಯಲ್ಲಿ ಮಿರ್ರಂತ
ಕೃಷ್ಣ ಅಹಿರಾ ಮೃಗ ಹೇಗಂತ
ಒಂದು ಸ್ಯಾಂಪಲ್ ತೋರಿಸಿದ

ಅಕ್ರೂರ್ ಜಿನ್ ಕುಡಿಯುತ್ತ ಕುಡಿಯುತ್ತ
ಒಂದಲ್ಲ ಎರಡು ಗಂಡು ಹೆಣ್ಣು
ನೋಡುತ್ತ ಅವೆರಡರಿಂದ ಸೃಷ್ಟಿ
ಯಾಗಿ ಹುಟ್ಟಿ ಬಂದ ಹಿಂಡು ಮರಿ ಕಂಡ

ಅತಿಥಿಗೆನಿಸಿತು ನಿರಾಳ
ಈ ದುಷ್ಟ (ಕಂಸ) ರಿಂದ ಸೃಷ್ಟಿಯ
ನಾಶ ಸಾಧ್ಯವಿಲ್ಲೆಂದು ಆಡಿದ, ಆಡಿದ
ನಂದ ಗೋಕುಲದ ಮಣ್ಣಲ್ಲಿ ಮನೆ ಹಿಂದಿನ
ಸಂದಿಯ ಕುಂಟೋ ಬಿಲ್ಲೆ.

ಅಕ್ಕನ ವಚನ
ಶಿವ ಹೇಳಿದ ಮಾತು
ಸಂಗಮ ಗೀತ
ಹೀಗೆ ಒಂದೇ ಎರಡೇ ಸಹಸ್ರಾರು
ವಿಶ್ವರೂಪ ಚಿಕ್ಕಂದು ಮುಕ್ಕಿದ ಬೀದಿ
ಮಣ್ಣು ನೆಲ ಕಚ್ಚಿ ನಿಂತು
ತೆಂಗಿನಂತೆ, ಮಾವಿನಂತೆ, ಆಲದ ಹಾಗೆ
ದೂರದಲ್ಲಿ.... ದೂರದೂರಿನಲ್ಲಿ ಸಮುದ್ರಗಳಾಚೆ
ಅತಿಥಿಯಾಗೇ ಅಕ್ರೂರ ಕಣ್ಮುಚ್ಚಿಕೊಂಡ.

''ಸ್ಕೂಲಿನಿಂದ ಕೆಂಪು ಪೆಪ್ಪರಮೆಂಟು
ಚೀಪುತ್ತ ಬರುವ ದಾರಿ
ಯಲ್ಲಿ ಎಕ್ಕ ಹುಟ್ಟಿದ ಮನೆ
ಬಿಟ್ಟು, ನಿನ್ನೆ ತಾನೇ
ಮೈಸೂರಿಂದ ಹೈಡ್ ಪಾರ್ಕಿಗೆ
ಬಂದೆ ಅಂತ ಅನ್ನಿಸುತ್ತ ಇದೆ.''
ಕೊನೆಯ ಸಾರಿಯೂ ಅತಿಥಿ
ಇದನ್ನು ಹೇಳಿದನೋ ಏನೋ?



# ಶಬ್ದ ಸಂದಣಿಯಲ್ಲಿ ಬೆಳಕಿನ ಹುಡುಕಾಟ



ವಿಕ್ರಮ ವಿಸಾಜಿ

ಫೆಬ್ರವರಿ ತಿಂಗಳು; ಎರಡು ಸಾವಿರದ ಮೂರು. ಶಿವಮೊಗ್ಗಾದಲ್ಲಿ 'ಕುಮಾರವ್ಯಾಸ ಭಾರತ' ಕುರಿತು ಚರ್ಚೆ ಇತ್ತು. ಹಿರಿಯರಾದ ಕುರ್ತುಕೋಟಿಯವರದು ಪ್ರಾಸ್ತಾವಿಕ ಭಾಷಣ. ಅವರ ಮಂಡನೆಯ ಕ್ರಮ, ಪದ್ಯಗಳ ನಿರೂಪಣೆ, ರಸಿಕ ದೃಷ್ಟಿಕೋನ ಅಚ್ಚರಿ ಮೂಡಿಸಿತ್ತು. ಅಂದು ಸಂಜೆ ಚರ್ಚೆಯಲ್ಲಿ ನಾನೊಂದು ಪ್ರಶ್ನೆ ಕೇಳಿದೆ; ಕೃತಿಯ ಒಳಗಿರುವ ವೈರುಧ್ಯಗಳನ್ನು, ವೈದಿಕ ಪರ-ವಿರೋಧದ ನೈತಿಕ ಇಕ್ಕಟ್ಟನ್ನು ಪ್ರಭುತ್ವ ಕುರಿತ ಗುಮಾನಿಯನ್ನು ನೀವು ಹೇಗೆ ಅರ್ಥೈಸುತ್ತೀರಿ? ತಕ್ಷಣ ಕುರ್ತುಕೋಟಿ ಸಿಟ್ಟಾದರು. 'ಶಬ್ದ ಉಳಿಯುತ್ತದೆ ಅರ್ಥ ಸಾಯುತ್ತದೆ' ಎಂಬ ಎಳೆಯನ್ನು ಹಿಡಿದುಕೊಂಡು ಕೋಪದಿಂದಲೇ ಉತ್ತರಿಸಿದರು. ನನಗೇನೂ ಅರ್ಥವಾಗಿರಲಿಲ್ಲ ಹತ್ತು ನಿಮಿಷ ಕುಳಿತು ಹೊರಹೋದವರು ಮತ್ತೆ ಒಳಗೆ ಬಂದಿರಲಿಲ್ಲ.

ಇದನ್ನು ಯಾಕೆ ಹೇಳಿದೆನೆಂದರೆ, ಅವರ ವಿಮರ್ಶಾ ಪ್ರಜ್ಞೆ ಸಾಹಿತ್ಯತತ್ವ ಕೇಂದ್ರಿತವಾದುದು. ಅದು ಕಲಾತ್ಮಕತೆ ಮತ್ತು ರಸಿಕತೆಯ ತುದಿಗಳನ್ನು ಮಾತ್ರ ಗಮನಿಸುತ್ತದೆ. ನೋಡಿ, ವಚನಗಳ ಕುರಿತು ಚರ್ಚಿಸುವಾಗಲೂ ವಚನಗಳು ಒಡ್ಡುವ ಸಾಹಿತ್ಯಿಕ ಪ್ರಶ್ನೆಗಳನ್ನೇ ಅವರು ಮುಖ್ಯವಾಗಿಟ್ಟುಕೊಳ್ಳುತ್ತಾರೆ. ಶರಣರ 'ನುಡಿ' 'ಶಬ್ದ-ನಿಶ್ಯಬ್ದ'ದ ಆಚೆ ಅವರು ಆಸಕ್ತಿ ತೋರಿಸುವುದು ಕಡಿಮೆ. ಬಸವಣ್ಣನ ವಚನಗಳ ಮಹತ್ವವನ್ನು ಕಂಡುಕೊಳ್ಳುವುದು ಅಲ್ಲಿಯ 'ಸಂವಾದ' ಮತ್ತು 'ಸ್ವಗತ' ಗುಣಗಳಲ್ಲಿ. ಈ ಅರ್ಥದಲ್ಲಿ ಅವರು 'ಪದ'ದ ಬೆನ್ನುಹತ್ತಿದ ವಿಮರ್ಶಕ. ('ಪದವನರ್ಪಿಸಬಹುದಲ್ಲದೆ ಪದಾರ್ಥವನರ್ಪಿಸಲಾಗದು'-ಅಲ್ಲಮ) 'ಪದ'ದ ಬೆನ್ನು ಹತ್ತಿದ್ದರಿಂದಲೇ ಅವರ ಬರಹಗಳು ಕಾವ್ಯದ ಸೌಂದರ್ಯಕ್ಕೆ ಮರುಳಾಗಿವೆ. ಅಲ್ಲದೆ, ಕಾವ್ಯದ ಸತ್ವಸನ್ನು ಅಲಂಕಾರ ಮತ್ತು ರಸಗಳಲ್ಲಿ ಹುಡುಕಿಕೊಂಡಿವೆ. ಬೆರಗು ಹುಟ್ಟಿಸುವ ಇಂಥ ಬರಹಗಳಿಗೆ ಆನಂದದ ಅಪೇಕ್ಷೆ ಜಾಸ್ತಿ. ಇಂಥಲ್ಲಿ ಸೂಕ್ಷ್ಮ ಚರ್ಚೆ ನಡೆದರೂ ಸಾಹಿತ್ಯಿಕ ಮಾನದಂಡಗಳಾಚೆ ಅದಕ್ಕೆ ಅಸ್ತಿತ್ವ ಇರುವುದಿಲ್ಲ. ಕನ್ನಡದಲ್ಲಿ 'ಪದಾರ್ಥ'ದ ಬೆನ್ನುಹತ್ತಿದ ವಿಮರ್ಶೆ ಕೂಡ ಇದೆ; ಕಾಲಕಾಲಕ್ಕೆ ಕೃತಿ ನೀಡುವ ಅರ್ಥಕ್ಕೆ ಒತ್ತುಕೊಟ್ಟ ಬರಹಗಳಿವು. ಇಲ್ಲಿ ಕೃತಿಯನ್ನು ನೈತಿಕ ಮತ್ತು ಸಾಂಸ್ಕೃತಿಕ ಚೌಕಟ್ಟಿನಲ್ಲಿ ನಿಕಷಕ್ಕೆ ಒಡ್ಡಲಾಗುತ್ತದೆ. ವೈರುಧ್ಯಗಳನ್ನು ಗಮನಿಸುವ ಮತ್ತು ಸಂದರ್ಭಗಳನ್ನು ರಾಜಕಾರಣದ ನೆಲೆಯಲ್ಲಿ ಪರಿಶೀಲಿಸುವ ಹಂಬಲ

ಮುನ್ನೆಲೆಗೆ ಬಂದಿರುತ್ತದೆ. ಕೃತಿಯ ಗ್ರಹಿಕೆಯಲ್ಲಿ 'ಪದ' ಆರಂಭವಾದರೆ 'ಪದಾರ್ಥ' ಅದರ ಗುರಿ. ಈ ಗುರಿ ಕಾಲಕಾಲಕ್ಕೆ ಬದಲಾಗುತ್ತಲೇ ಇರುವುದು. ಹೀಗೆ ಬದಲಾಗುವುದು ಇದರ ಜೀವಂತಿಕೆಯ ಲಕ್ಷಣ.

ಕುರ್ತುಕೋಟಿಯವರ ಓದು ವಿಶಾಲವಾದುದು. 'ಸಾಹಿತ್ಯ ಸಂಗಾತಿ' ಇದಕ್ಕೊಂದು ನಿದರ್ಶನ. ಈ ಕೃತಿಯನ್ನು ಕೇಂದ್ರದಲ್ಲಿಟ್ಟುಕೊಂಡು ಅವರ ಒಟ್ಟು ವಿಮರ್ಶೆಯ ಹಿಂದಿರುವ ತಾತ್ವಿಕತೆಯನ್ನು ಅರಿತುಕೊಳ್ಳಬಹುದು. ಇಲ್ಲಿ ಶಾಸನ, ಹಳೆಗನ್ನಡ, ವಚನಸಾಹಿತ್ಯ, ನಡುಗನ್ನಡ, ಕೀರ್ತನೆ, ನಾಟಕ, ತತ್ವಪದ, ಕೆರೆಗೆಹಾರ - ಎಲ್ಲವೂ ಅವರ ಬರಹದ ಆಸಕ್ತಿಗೆ ಒಳಪಟ್ಟಿವೆ. ಬಿಡಿಬಿಡಿಯಾಗಿ ಇವುಗಳ ಕುರಿತು ಬರೆದರೂ ಬರಹದ ಹಿಂದಿನ ಒತ್ತಡ ಮಾತ್ರ ಒಂದೇ ಆಗಿದೆ; ಅದು ಭಾಷೆಯ ಸಾಮರ್ಥ್ಯದ ಆಲೋಚನೆ. ಪದಗಳ ಬಳಕೆ, ಅದರ ಸತ್ವ, ತಾಳಿಕೆಯ ಗುಣ, ಅದು ಮೂಡಿಸುವ ಬೆರಗು ಅವರ ಚರ್ಚೆಯ ಮುಖ್ಯ ಸಂಗತಿಗಳು. ಹಲ್ಮಿಡಿ ಶಾಸನದಿಂದ ಹಿಡಿದು ಕೆರೆಗೆ ಹಾರ ಪದ್ಯದವರೆಗೆ ಅವರ ಪ್ರಜ್ಞೆಗೆ ತಾಕಿದ ಅಂಶವೆಂದರೆ ಭಾಷೆ ಎಂಬ ವಿಸ್ಮಯ. ಕೃತಿಯ ಭಾಷಿಕ ಸೂಕ್ಷ್ಮಗಳನ್ನು ಕನ್ನಡದಲ್ಲಿ ಕುರ್ತುಕೋಟಿಯವರ ಹಾಗೆ ವಿಶ್ಲೇಷಿಸಿದವರು ಕಡಿಮೆ.

ಅನೇಕ ಸಲ ಶಬ್ದಸಂದಣಿಯಲ್ಲಿ ಅವರು ಗುರುತಿಸಿದ ಬೆಳಕು ವಿಶಿಷ್ಟವಾದದ್ದು; ಆದಿಪುರಾಣದಲ್ಲಿನ ಬಾಹುಬಲಿಯ ವೈರಾಗ್ಯದ ಮಾತುಗಳಲ್ಲಿರುವ ವ್ಯಂಗ್ಯದ ಆಳ ಗುರುತಿಸಿದ್ದು, ಮಾರ್ಗ-ದೇಸಿಗಳ ಒಡಂಬಡಿಕೆ ಪಂಪನಿಗೆ ಎಷ್ಟು ಸಂಕೀರ್ಣವಾದ ಕ್ರಿಯೆಯಾಗಿತ್ತು ಎಂಬುದನ್ನು ದರ್ಶಿಸಿದ ಸೂಕ್ಷ್ಮತೆ, ನಯಸೇನನ 'ಧರ್ಮಾಮೃತ'ದ ಕುರಿತು ಬರೆಯುವಾಗ ಮಾಡಿದ ಉಪಮಾನ - ಉಪಮೇಯಗಳ ಚರ್ಚೆ, ಅಲೌಕಿಕದ ಸಾಧನೆಗಾಗಿ ಕವಿಗಳು ಬಳಸಿಕೊಳ್ಳುವ ಲೌಕಿಕ ಉಪಮಾನಗಳ ಕುರಿತ ಚಿಂತನೆ, 'ಕುದಿಯುವ ನೀರಾಗ ಅಕ್ಕಿಯ ಸುರುವ್ಯಾರ। ಉಕ್ಕುವ ಹಾಲಾಗ ಶಾವೀಗಿ ಸುರುವ್ಯಾರ। ಇದು ಕೇವಲ ಅಡಿಗೆಯ ವರ್ಣನೆಯಾಗಿರದೆ ಬಲಿಕರ್ಮದ ಪ್ರತೀಕವಾಗಿದೆ ಎಂಬ ಗ್ರಹಿಕೆ, ಚುರುಮುರಿಯವರ 'ಶಾಕುಂತಲ' ನಾಟಕದ ಮೇಲಿರುವ ಜನಪದ ಕಾವ್ಯನಾಟಕಗಳ ಪ್ರಭಾವವನ್ನು ತೋರಿಸಿದ್ದು, ಕೃಷ್ಣಾರ್ಜುನರ ಸ್ನೇಹಕ್ಕೆ ಕರ್ಣ - ದುರ್ಯೋಧನರ ಸ್ನೇಹವನ್ನು ಪ್ರತಿಯಾಗಿ ಇಟ್ಟು ಪಂಪನ ಕಾವ್ಯ ಪಡೆದುಕೊಳ್ಳುವ ಲಾಭವನ್ನು ದಾಖಲಿಸಿದ್ದು ಅವರ ವಿದ್ವತ್ತಿಗೆ ನಿದರ್ಶನ. ಕುರ್ತುಕೋಟಿಯವರ ವಿಮರ್ಶೆಯ ಮಹತ್ವವಿರುವುದು ಇಂಥಲ್ಲಿಯೇ ಎಂಬುದು ನನ್ನ ಅನಿಸಿಕೆ.

ವಾಗಾರ್ಥದ ಸಂಬಂಧ ಕುರಿತ ಅವರ ಚಿಂತನೆ ಕೂಡ ಮುಖ್ಯವಾದದ್ದು. ಆದರೆ ಅವರ ವಿಮರ್ಶೆಯಲ್ಲಿ ಹೆಚ್ಚು ವಿಜೃಂಭಿಸುವುದು 'ವಾಕ್' ಹೊರತು 'ಅರ್ಥ'ವಲ್ಲ. ಅವರು ಕಂಡುಕೊಳ್ಳುವ ಅರ್ಥಗಳು 'ವಾಕ್' ವಿಲಾಸವನ್ನು ಸಮರ್ಥಿಸುವ ಕೆಲಸ ಮಾಡುತ್ತವೆ. ಅಂದರೆ 'ಅರ್ಥ' ಕೃತಿಯ 'ಶಬ್ದ'ದ ಸಾಮರ್ಥ್ಯವನ್ನು ಮನಗಾಣಿಸಲು ಬಳಕೆಯಾಗುವುದು.

ಕುರ್ತುಕೋಟಿಯವರ ಗ್ರಹಿಕೆಯನ್ನು ಪ್ರಭಾವಿಸಿದ್ದು ಭಾರತೀಯ ಕಾವ್ಯಮೀಮಾಂಸೆ. 'ಶಾಸ್ತ್ರದಲ್ಲಿ ಅರ್ಥ ಮುಖ್ಯವಾಗಿ ಶಬ್ದ ಗೌಣವಾಗಿರುವುದರಿಂದ ಶಾಸ್ತ್ರ ಭಾಷೆಯ ಬಗ್ಗೆ

ಅಷ್ಟೊಂದಾಗಿ ತಲೆ ಕೆಡಿಸಿಕೊಳ್ಳಲಿಲ್ಲ. ಆದರೆ ಕಾವ್ಯದ ಮಾತು ಬೇರೆ, ಅಲ್ಲಿ ಶಬ್ದಾರ್ಥಗಳೆರಡೂ ಮುಖ್ಯವಾಗಿರುವುದರಿಂದ ಅಲ್ಲಿ ಶಬ್ದಾರ್ಥಗಳ ಅವಿಭಾಜ್ಯ ಸಂಬಂಧ ಅನಿವಾರ್ಯವಾಗಿರುತ್ತದೆ.' (ಪು: 147) ಕಾವ್ಯದ ಸ್ವರೂಪ ಕುರಿತು ಕಾವ್ಯಮೀಮಾಂಸಕರು ಹೇಳಿದ ವಿಚಾರಗಳನ್ನೆ ಕುರ್ತುಕೋಟಿ ಮುಂದುವರೆಸುತ್ತಿದ್ದಾರೆ. ಅವರ ವಿಮರ್ಶಾ ಪ್ರಜ್ಞೆ ಭಾರತೀಯ ಕಾವ್ಯಮೀಮಾಂಸೆ ಅದರಲ್ಲೂ ಆನಂದವರ್ಧನನ ಧ್ವನ್ಯಾಲೋಕದಿಂದ ಹಲವಾರು ಸಂಗತಿಗಳನ್ನು ಕಾಪಿಟ್ಟುಕೊಂಡಿದೆ. ಕವಿ ತನ್ನ ರಚನೆಯು ವ್ಯಂಗ್ಯಾರ್ಥವನ್ನು ಪ್ರತೀಯಮಾನಗೊಳಿಸಲು ಶಕ್ತವಾಗುವಂತೆ ರೂಪಿಸಬೇಕು ಎಂಬ ತಾತ್ವಿಕ ಚಿಂತನೆ ಅವರ ಪ್ರಜ್ಞೆಯ ತಳದಲ್ಲಿದೆ. ಧ್ವನಿ ಪ್ರಭೇದದ ಹಲವು ಸಂಗತಿಗಳನ್ನು ಮೂಲ ಪರಿಭಾಷೆಗಳ ಹೆಸರು ಬಳಸದೆ ವಿಶ್ಲೇಷಣೆಗೆ ಎಳೆದುಕೊಂಡಿದ್ದಾರೆ. ಪ್ರಾಚೀನ ಕನ್ನಡ ಕಾವ್ಯವನ್ನು ಇದಕ್ಕೆ ಮಣಿಸಿ ಓದಲು ಯತ್ನಿಸಿದ್ದಾರೆ.

**'ಬಗೆಪೊಸದಪ್ಪುದಾಗಿ ಮೃದುಬಂಧದೊಳೊಂದುವದೊಂದಿ ದೇಸಿಯೊಳ್ ಪುಗುವುದು, ಪೊಕ್ಕು ಮಾರ್ಗದೊಳೆ ತಳ್ಳುದು, ತಳ್ತೊಡೆ ಕಾವ್ಯಮೊಪ್ಪುಗುಂ'' - ಕಲೆ ಸತ್ವಪೂರ್ಣ ಆಗಬೇಕಾದರೆ ಇವೆರಡೂ ಒಂದಾಗಬೇಕು ಎಂಬ ಆಶಯ ಪಂಪನ ಮಾತುಗಳಲ್ಲಿದೆ. ಪಂಪನ ಮಾತುಗಳಲ್ಲಿಯ ಪ್ರಾಮಾಣಿಕವಾದ ಹಾರೈಕೆ ಮಾತ್ರ ಈ ಎರಡೂ ರೀತಿಗಳಲ್ಲಿ ಹೊಂದಾಣಿಕೆ ಇರಲಿಲ್ಲವೆಂದೇ ಸೂಚಿಸುತ್ತದೆ. ಪಂಪನದು ಒಂದು ಆದರ್ಶಮಾತ್ರ; ಈ ಆದರ್ಶ ಭಾಷೆಗಳಲ್ಲಿಯೇ ಹುಟ್ಟಿಬರುವ ಬಯಕೆಯಾಗಬೇಕು. ಭಾಷೆಯಲ್ಲಿ ಆ ಬಯಕೆ ಇಲ್ಲದಿದ್ದರೆ ಕವಿಯ ಕಾವ್ಯ ಸಂಕಲ್ಪದಿಂದಲೇ ಆ ಆದರ್ಶ ಈಡೇರಬಹುದೆ?' (ಪು:6).**

ಧ್ವನಿವಾದಿಗಳು ಮತ್ತು ಧ್ವನಿವಿರೋಧಿಗಳು ಹುಟ್ಟುಹಾಕಿದ ಚರ್ಚೆಯನ್ನು ಕುರ್ತುಕೋಟಿ ಅಂತರ್ಜಲದಂತೆ ತಮ್ಮ ವಿಮರ್ಶೆಗಳಲ್ಲಿ ಇಟ್ಟುಕೊಂಡಿದ್ದಾರೆ. ಈ ಕುರಿತು ಹೆಚ್ಚಿನ ಅಧ್ಯಯನ ಅಗತ್ಯ. ಇದನ್ನು ಎಳೆಎಳೆಯಾಗಿ ಬಿಡಿಸಿ ತೋರಿಸುವುದು ನನಗೆ ಕಷ್ಟವೆನಿಸುತ್ತಿದೆ. ಇರಲಿ, ಆನಂದವರ್ಧನನ ಧ್ವನಿಸಿದ್ಧಾಂತ ರಸಸಿದ್ಧಾಂತವನ್ನು ಜೊತೆಯಿಟ್ಟುಕೊಂಡೆ ಬೆಳೆದಿದೆ. ಕುರ್ತುಕೋಟಿಯವರ ವಿಮರ್ಶೆಗೂ ಈ ಮಾತು ನಿಜ.

ಒಂದರ್ಥದಲ್ಲಿ ಕುರ್ತುಕೋಟಿಯವರು 'ಆದಿಪುರಾಣ'ದ ಪುರುದೇವನಂತೆ. ಪ್ರಾಚೀನ ಮಹಾಕಾವ್ಯಗಳ ಓದು ಅವರಿಗೆ ನೀಳಾಂಜನೆಯ ನೃತ್ಯ. ನೀಳಾಂಜನೆಯ ಸಾವು ಪುರುದೇವನಿಗೆ ಗೊತ್ತಾದಂತೆ ಕೃತಿಯಲ್ಲಿನ ವಾಗಾರ್ಥಗಳ ಹುಸಿ ಸಂಬಂಧ ಅವರಿಗೆ ಥಟ್ಟನೆ ಗೋಚರಿಸುತ್ತದೆ. ನೀಳಾಂಜನೆಯ ನೃತ್ಯ ಮುಂದುವರಿಸುವ ಮಾಯೆಯಂಥವರು ಕುರ್ತುಕೋಟಿಯವರಿಗೆ ಇಷ್ಟವಾಗುವುದಿಲ್ಲ. ಪಾತ್ರ ಸೃಷ್ಟಿಯಲ್ಲಿನ ಕ್ರಮಭಂಗವನ್ನು ತಾಳಿದರೂ ಅಭಿಜಾತ ನೃತ್ಯದ ಕ್ರಮಭಂಗವನ್ನವರು ಸಹಿಸುವುದಿಲ್ಲ. ವಿಚಿತ್ರವೆಂದರೆ ನೀಳಾಂಜನೆಯ ಸಾವಿನಿಂದ ಪುರುದೇವನಿಗೆ ಅತಿಶಯಭೋದಲ್ಲಿ ವಿರಕ್ತಿ ಹುಟ್ಟಿದರೆ, ಇವರಿಗೆ ತಮ್ಮ ನಂಬಿಕೆಯ ಬಗೆಗೆ ವಿಶ್ವಾಸ ವೃದ್ಧಿಸುತ್ತದೆ.

ಅವರ 'ಸಾಹಿತ್ಯ ಸಂಗಾತಿ' ಯಲ್ಲಿ ಈ ಕ್ರಮ ಮತ್ತು ವಿಕ್ರಮವು ಮುಖ್ಯ ತಾತ್ವಿಕ ಸಂಗತಿಯಾಗಿ ಚರ್ಚಿತವಾಗಿದೆ. ಪಂಪಭಾರತದಲ್ಲಿ ಕ್ರಮ ಮೀರಿ ವಿಕ್ರಮ ಸ್ಥಾಪಿಸಿದ ಭೀಷ್ಮ,

ಅರ್ಜುನ, ಅಭಿಮನ್ಯು ಕುರಿತು ಬರೆದಿದ್ದಾರೆ. 'ಕ್ರಮವನ್ನು ಮೀರುವುದೇ ಒಂದು ಅಪಾಯಕರವಾದ ಸಾಹಸ. ಅದಕ್ಕಾಗಿ ನೈತಿಕವಾದ ಎದೆಗಾರಿಕೆ ಬೇಕು. ಕ್ರಮವನ್ನು ಮೀರಿದವರು ವಿಕ್ರಮವನ್ನು ಪಡೆಯಬಹುದು. ಆದರೆ ಕ್ರಮವನ್ನು ಮೀರಿ ಹೋಗುವ ಅಕ್ರಮವೂ ಇದೆ' ಎಂದಿರುವ ಅವರು ಇದಕ್ಕೆ ನಿದರ್ಶನವಾಗಿ ಕರ್ಣನನ್ನು ಹೆಸರಿಸಿದ್ದಾರೆ. **'ಕುಲಕುಲಮೆಂದು ಮುನ್ನ ಮುಗ್ಗಡಿಪರೇಗಳ ನಿಮ್ಮ ಕುಲಂಗಳಾಂತು ಮಾರ್ಮಲೆವವರನಟ್ಟಿ ತಿಂಬುವೆ, ಕುಲಲಕುಲಮಲ್ತು'**- ಎಂದು ಕುಲಕ್ರಮವನ್ನು ಧಿಕ್ಕರಿಸುವ ಕರ್ಣನದೂ ಕ್ರಮವಲ್ಲ ನಿಜ. ಆದರೆ ಅದು ವಿಕ್ರಮವೂ ಅಲ್ಲ' ಎಂಬ ನಿರ್ಧಾರಕ್ಕೆ ಬಂದಿದ್ದಾರೆ. ಅವರ ತರ್ಕ ವಿಚಿತ್ರವಾದುದು. ಇಂಥ ನಿಲುವುಗಳನ್ನು ಸೂಕ್ಷ್ಮವಿಮರ್ಶೆಗೆ ಒಡ್ಡುವುದು ಅಗತ್ಯ.

ಇನ್ನೊಂದು ಕಡೆ, **'ಜೈನ ಸಾಹಿತ್ಯದ ಮಟ್ಟಿಗೆ ಹೇಳುವುದಾದರೆ ಸ್ವತಂತ್ರವಾಗಿ ತನ್ನ ಅರ್ಥವನ್ನು ಬೀರಬಲ್ಲದಾಗಿತ್ತು. ಕಾರಣವೆಂದರೆ ಜೈನಧರ್ಮಕ್ಕೆ ಇದ್ದ ರಾಜಾಶ್ರಯವೆಂದೇ ಹೇಳಬೇಕು. ರಾಜಾಶ್ರಯವಿದ್ದರೆ ಅದರ ಗುಣಮಟ್ಟ ಕಡಿಮೆಯಾಗುತ್ತದೆಂಬ ಪೂರ್ವಾಗ್ರಹ ಇಲ್ಲಿ ಅಪ್ರಸ್ತುತವಾಗಿದೆ. ಶಬ್ದಕ್ಕೆ ಅರ್ಥ ಬರುವುದೇ ಪ್ರಭುಶಕ್ತಿಯಿಂದ' (ಪು: 146)** ಇಲ್ಲಿಯ ಕೊನೆಯ ಸಾಲನ್ನು ಗಮನಿಸಿ. ರಾಜಕಾರಣದ ನೆಲೆಯಲ್ಲಿ ಈ ಮಾತು ನಿಜವಿರಬಹುದು. ಆದರೆ ಕಾವ್ಯದ ಕುರಿತು ಕೂಡ ಇದೇ ಮಾತು ಹೇಳಿದರೆ ಹುಸಿ ಎನಿಸುತ್ತದೆ. ಕನ್ನಡದಲ್ಲಿ ಪ್ರಭುಶಕ್ತಿಯ ನೆರವಿಂದ ಶಬ್ದಕ್ಕೆ ಅರ್ಥ ಬಂದಿರುವಂತೆಯೇ ಪ್ರಭುಶಕ್ತಿಯನ್ನು ವಿರೋಧಿಸುವ ಗುಣದಿಂದಲೂ ಶಬ್ದಕ್ಕೆ ಅರ್ಥಬಂದಿದೆ. ಇದು ಕುರ್ತುಕೋಟಿಯವರಿಗೂ ಗೊತ್ತು. ಹಾಗಾದರೆ ಇಂಥ ಸಾಲಿನ ಅರ್ಥವೇನು? ಕನ್ನಡ ಸಾಹಿತ್ಯದ ಸ್ವಭಾವವನ್ನು ಯಾಕೆ ತೀರಾ ಸರಳೀಕರಿಸಿದ್ದಾರೆ? ಅವರ ವಿಮರ್ಶೆಗೆ ಸಾಂಪ್ರದಾಯಿಕ ಭಿತ್ತಿ ಇದೆ, ಸಮಕಾಲೀನ ನೋಟಗಳಿಲ್ಲ. ಒಂದು ಅಥವಾ ಎರಡು ಪದ್ಯಗಳ ಮೂಲಕ, ಇಲ್ಲವೆ ಪ್ರಸಂಗವೊಂದರ ಮುಖಾಂತರ ಕೃತಿಯ ಚರ್ಚೆಗೆ ತೊಡಗುವುದು ಅವರ ವಿಮರ್ಶೆಯ ಮುಖ್ಯ ವಿಧಾನ. ಇನ್ನು ಕುರ್ತುಕೋಟಿ ಎಂಥ ಪದ್ಯಗಳನ್ನು ಚರ್ಚೆಗೆ ಎತ್ತಿಕೊಳ್ಳುತ್ತಾರೆ? ಸಾಮಾನ್ಯವಾಗಿ ತನ್ನ ವಿಮರ್ಶಾ ನಿಲುವುಗಳಾಚೆ ನಿಂತುಕೊಳ್ಳುವ ಪದ್ಯಗಳನ್ನವರು ವಿಶ್ಲೇಷಿಸುವುದಿಲ್ಲ. ಒಟ್ಟಾರೆ ಸಾಂಸ್ಕೃತಿಕ ಸಂದರ್ಭದಲ್ಲಿ ಆ ಪದ್ಯ ಎಷ್ಟೇ ಮಹತ್ವದ್ದಾಗಿದ್ದರೂ ಆ ಕುರಿತು ಆಸಕ್ತಿ ತೋರುವುದಿಲ್ಲ. ಅದು ಮೊದಲು ತನ್ನ ಭಾಷಿಕ ಸಾಮರ್ಥ್ಯವನ್ನು ಸಾಬೀತು ಪಡಿಸಬೇಕು; ಅದರ ಅರ್ಥದ ಸಾಧ್ಯತೆಗಳೇನಾದರೂ ಇರಲಿ ಈ ತರಹದ ಒಂದು ಮನೋಭಾವ ಅವರ ವಿಮರ್ಶೆಯಲ್ಲಿದೆ.

ಒಂದರ್ಥದಲ್ಲಿ ಅವರದು ಅರಾಜಕ ಪ್ರತಿಭೆ. (ಇದನ್ನು ಆಕ್ಷೇಪದ ದನಿಯಲ್ಲಿ ಹೇಳುತ್ತಿಲ್ಲ) ತಮ್ಮ ಹೆಚ್ಚಿನ ಬರಹಗಳಲ್ಲಿ ಸೂತ್ರವಿಲ್ಲದ ಚಿಂತನೆಯ ಎಳೆಗಳನ್ನು ಚೆಲ್ಲುತ್ತಾ ಸಾಗುತ್ತಾರೆ. ಚರ್ಚೆ ಎತ್ತೆತ್ತೊ ಸಾಗಿ ಮೂಲಕ್ಕೆ ಬಂದು ಕನೆಕ್ಟ್ ಆಗುತ್ತಿರುತ್ತದೆ. ವಚನಕಾರರನ್ನು ಕುರಿತು ಬರೆದಿರುವುದನ್ನು ನೋಡಿ, ಈ ಬರಹದ ಚಲನೆ ಹೀಗಿದೆ; ಅನುಭಾವಗೋಷ್ಠಿಯ ಕುರಿತು ಟಿಪ್ಪಣಿ, ಕಾಳಿದಾಸ-ಭವಭೂತಿಯರ ಹೋಲಿಕೆ, ಪಂಪನ ಚರ್ಚೆ, ಹರಳಯ್ಯ-ಮಧುವರಸರ ಜಾತಿಗಳ ಚರ್ಚೆ, ಹರಿಹರನ ವಿವರ, 'ವಚನ'ದ ವಿಶ್ಲೇಷಣೆ, ಕತೆ-

ಇತಿಹಾಸದ ಸಂಬಂಧಗಳ ಸ್ವರೂಪ, ಶರಣನ ವ್ಯಕ್ತಿತ್ವದ ಚಿಂತನೆ, ಅಲ್ಲಮನ ದೃಷ್ಟಿ ಬಸವಣ್ಣನ ವಚನ ವಿಶ್ಲೇಷಣೆ, ಬಿಜ್ಜಳನ ಕೊಲೆಯ ಪ್ರಸ್ತಾಪ - ಇಷ್ಟು ಸಂಗತಿಗಳು ಈ ಬರಹದಲ್ಲಿ ಹರಿಡಿಕೊಂಡಿವೆ. ಸೂಕ್ಷ್ಮತೆಗೇನೂ ಇಲ್ಲಿ ಕೊರತೆಯಿಲ್ಲ. ಆದರೆ ತಮ್ಮ ವಿಶಾಲ ಓದು ಮತ್ತು ಹಲವು ಸಂಗತಿಗಳ ಪರಿಚಯವನ್ನು ಏಕಕಾಲಕ್ಕೆ ಬಳಸಿಕೊಳ್ಳುವ ಉತ್ಸಾಹ ಅವರ ಬಹುಪಾಲು ಬರಹಗಳಲ್ಲಿದೆ.

ವಡ್ಡಾರಾಧನೆಯ ಬಗ್ಗೆ ಪರಿಚಯಾತ್ಮಕ ಬರಹ ಕೂಡ ಇಲ್ಲಿದೆ. ಧರ್ಮಾಚರಣೆ ಮತ್ತು ಧರ್ಮೋಪದೇಶವನ್ನು ಕಥೆಗಳ ಕೇಂದ್ರವಾಗಿ ಗ್ರಹಿಸಿದ್ದಾರೆ. ಜೊತೆಗೆ ಕತೆಗಾರಿಕೆಯ ಲಕ್ಷಣಗಳನ್ನು ವಿಶ್ಲೇಷಿಸಲು ಯತ್ನಿಸಿರುವರು. ಮನುಷ್ಯ ಸಂಬಂಧಗಳ ಸೂಕ್ಷ್ಮತೆ, ಧಾರ್ಮಿಕ ಒತ್ತಡಗಳಲ್ಲಿ ನರಳುವ ವ್ಯಕ್ತಿತ್ವಗಳನ್ನು ಅರ್ಥಮಾಡಿಕೊಳ್ಳದಿದ್ದರೆ ವಡ್ಡಾರಾಧನೆಯ ಕಥೆಗಳಿಂದ ಹೆಚ್ಚು ಪಡೆದುಕೊಳ್ಳಲು ಸಾಧ್ಯವಿಲ್ಲವೇನೊ. ದುರ್ಗಸಿಂಹನ 'ಕರ್ಣಾಟಕ ಪಂಚತಂತ್ರ'ದ ಬಗ್ಗೆ ಇರುವ ಬರಹ ಕೂಡ ಪರಿಚಯದ ಮಟ್ಟಕ್ಕೆ ನಿಂತುಬಿಟ್ಟಿದೆ. ಗದ್ಯಕೃತಿಗಳ ಬಗ್ಗೆ ಮಾಡಿರುವ ವಿಮರ್ಶೆಯಲ್ಲಿ ಅಷ್ಟು ಸೂಕ್ಷ್ಮತೆಯಿಲ್ಲ. ಆದೇ 'ಶ್ರೀಕೃಷ್ಣ ಪಾರಿಜಾತ', 'ಸಂಗ್ಯಾ ಬಾಳ್ಯಾ' ನಾಟಕಗಳ ವಿಮರ್ಶೆ ಅಪರೂಪದ್ದು. ಸಂಗ್ಯಾ-ಬಾಳ್ಯಾ ನಾಟಕದ ಹೊರಗಿನ ಸಂಗತಿಗಳನ್ನು ಕೂಡ ಕಲೆಹಾಕಿಕೊಂಡು ಅರ್ಥೈಸಿದ್ದಾರೆ. ಇಲ್ಲಿಯ ಹಾಡುಗಳಲ್ಲಿನ 'ಸಂಪ್ರದಾಯದ ನೀರಸ ಜಗತ್ತಿನ ಆಳದಲ್ಲಿರುವ ರಸನಿಮಿಷಗಳನ್ನು' ಕಂಡುಹಿಡಿಯುವಲ್ಲಿನ ಅವರ ಜಾಣ್ಮೆ ವಿಶಿಷ್ಟವಾದದ್ದು. ಅಂದರೆ, ಶುದ್ಧಗದ್ಯಕ್ಕೆ ಅವರ ವಿಮರ್ಶಾ ಪರಿಕರಗಳು ಅಷ್ಟು ಹೊಂದುವುದಿಲ್ಲ ಎನಿಸುತ್ತದೆ.

ಆಧುನಿಕ ಕನ್ನಡ ಸಾಹಿತ್ಯದ ಕುರಿತು ಕುರ್ತುಕೋಟಿಯವರು ಬರೆದ ವಿಮರ್ಶೆ ಹೆಬ್ಬಾಗಿಲಿನ ತರಹ. ಈಗ ನಮಗೆಲ್ಲಾ ಆ ಹೆಬ್ಬಾಗಿಲಿನ ಬಗ್ಗೆ, ಅದು ತನ್ನೊಳಗೆ ಬಿಟ್ಟುಕೊಂಡ ಕೃತಿಗಳ ಬಗ್ಗೆ ತಕರಾರುಗಳಿರಬಹುದು. ತಕರಾರುಗಳನ್ನು ಎತ್ತಲಾದರೂ ಅವರ ವಿಮರ್ಶೆಯನ್ನು ಓದಬೇಕು. ಇನ್ನು ನಮ್ಮ ಪ್ರಾಚೀನ ಸಾಹಿತ್ಯಕ್ಕೆ 'ಸಾಹಿತ್ಯ ಸಂಗಾತಿ'ಯಲ್ಲಿ ಅವರು ಬರೆದಿರುವ ವಿಮರ್ಶೆ ಮನೆಯ ಹಿಂದಿನ ಕಾಡನ್ನು ಕಾಣಲು ಬಿಟ್ಟ ಕಿಂಡಿಯ ತರಹ. ಇದೇನೆ ಇರಲಿ, ಕುರ್ತುಕೋಟಿಯವರ ವಿಮರ್ಶೆ ತನ್ನದೇ ಆದ ಸಿದ್ಧಾಂತವನ್ನು ರೂಪಿಸಿಕೊಳ್ಳಬೇಕೆಂಬ ಅಪೇಕ್ಷೆಯದಲ್ಲ. ತನ್ನ ಪರಂಪರೆಯಲ್ಲಿನ ಬೌದ್ಧಿಕ ಸಂವಾದಗಳನ್ನು ಮುಂದುವರಿಸುವ ಹಂಬಲದ್ದು.

ಬಹುಶಃ ರಸಗ್ರಹಣಕ್ಕೆ ಆ ಮೂಲಕ ರಸದ ಪರಿಣಾಮವಾದ ಆನಂದಕ್ಕೆ ಬಂದು ನಿಲ್ಲುವ ಮನೋಭಾವ ಹೊಸ ಸಿದ್ಧಾಂತಗಳ ಕಂಡುಕೊಳ್ಳುವಿಕೆಗೆ ಅಷ್ಟು ಆಸ್ಪದ ಮಾಡಿಕೊಡುವುದಿಲ್ಲ. ಕುರ್ತುಕೋಟಿಯವರ ಸ್ಪಂದನೆ ರಸಪರವಾಗಿತ್ತು. ಈ ರಸದ ಮುಂದಿನ ಘಟ್ಟವೇ ಆನಂದ; ಅದರಾಚೆ ಏನು ಕಂಡುಕೊಳ್ಳುವುದು? ನಮ್ಮ ಕಾವ್ಯಪ್ರಸ್ಥಾನಗಳ ಕೊನೆಯ ನಿಲ್ದಾಣವಿದು. ನಮ್ಮೆಲ್ಲ ಪ್ರಸ್ಥಾನಗಳು ಶಬ್ದಾರ್ಥಗಳ ಅನ್ಯೋನ್ಯ ಸಂಬಂಧದಿಂದ ಶುರುವಾಗಿ ಆನಂದಕ್ಕೆ ಬಂದು ನಿಲ್ಲುತ್ತವೆ. ಭಾರತೀಯ ಕಾವ್ಯಮೀಮಾಂಸೆಯ ಪ್ರಸ್ಥಾನಗಳು ಮುಂದೆ ಬೆಳೆಯದೇ

ಇರುವುದಕ್ಕೆ ಆನಂದದ ಅತಿಯಾದ ಅಪೇಕ್ಷೆ ಕೂಡ ಒಂದು ಬಲವಾದ ಕಾರಣ ಆಗಿರಬಹುದು.

ಭಾರತೀಯ ಕಾವ್ಯಮೀಮಾಂಸೆ ಮತ್ತು ಪಾಶ್ಚಾತ್ಯ ಕಾವ್ಯ ಮೀಮಾಂಸೆ ಎರಡರಲ್ಲಿ ಕುರ್ತುಕೋಟಿಯವರು ಹೆಚ್ಚಾಗಿ ಬಳಸಿಕೊಂಡದ್ದು ಭಾರತೀಯ ಕಾವ್ಯಮೀಮಾಂಸೆಯಿಂದ ಒದಗಿದ ತಿಳುವಳಿಕೆ. ನಮ್ಮ ಆಧುನಿಕ ವಿಮರ್ಶಕರಲ್ಲಿ ಭಾರತೀಯ ಕಾವ್ಯ ಮೀಮಾಂಸೆಯನ್ನು ಹೀಗೆ ವಿಸ್ತಾರವಾಗಿ ದುಡಿಸಿಕೊಂಡವರು ಕಡಿಮೆ. ಪಾಶ್ಚಾತ್ಯ ಸಾಹಿತ್ಯ ಸಂಪರ್ಕದಿಂದ ನಮಗೆ ಒದಗಿದ ಹೊಸ ವೈಚಾರಿಕತೆಯ ಫಲಗಳನ್ನು ಕುರ್ತುಕೋಟಿ ಸದಾ ಗುಮಾನಿಯಿಂದ ನೋಡುತ್ತಾರೆ. ಇಂಥ ಫಲಗಳು ಕೃತಿಯ ಸ್ವೋಪಜ್ಞ ಗ್ರಹಿಕೆಗೆ ಆತಂಕ ಉಂಟುಮಾಡುವವು ಎಂಬ ನಂಬಿಕೆ ಅವರದು. ನೋಡಿ, 'ಸಾಹಿತ್ಯಸಂಗಾತಿ'ಯ ಯಾವ ಬರಹವನ್ನು ತಟ್ಟಿದರೂ ಪಾಶ್ಚಾತ್ಯ ನೋಟದ ನಿದರ್ಶನಕ್ಕೆ ಒಂದು ಸುಳಿವೂ ಸಿಗುವುದಿಲ್ಲ. (ಕುರ್ತುಕೋಟಿ ಇಂಗ್ಲೀಷ್ ಪ್ರಾಧ್ಯಾಪಕರು ಎಂಬುದನ್ನು ಗಮನಿಸಿರಿ). ಆದರೆ ಭಾರತೀಯ ಕಾವ್ಯಮೀಮಾಂಸೆಯನ್ನು ಸೂಕ್ಷ್ಮ ಸ್ತರಗಳಿಗೆ ಒಯ್ಯುವ ಶ್ರದ್ಧೆ ಗಾಢವಾಗಿದೆ. ಹೀಗಾಗಿ ಕುರ್ತುಕೋಟಿ ಪರ್ಯಾಯ ಮಾದರಿಗಳನ್ನು ಹೆಕ್ಕಿ ತೆಗೆಯುವ ಚಿಂತಕರಲ್ಲ. ಪ್ರಾಚೀನ ಮಾದರಿಗಳ ಕಿಲುಬು ಸರಿಸುವ ಹಟವಾದಿ. ತಾನು ನಂಬಿದ ತತ್ವಗಳನ್ನು ಕೊನೆಯವರೆಗೂ ಅವರು ವಿಮರ್ಶೆಯಲ್ಲಿ ಬದಲಿಸಿ ಕೊಳ್ಳಲಿಲ್ಲ. ಇಂಥ ಜಿಗುಟುತನವೇ ಅವರ ಬರಹದಲ್ಲಿ ರಸಿಕ ಓದಿನ ಉತ್ತಮ ದಾರಿಗಳನ್ನು ತೆರೆದಿದೆ. ಜೊತೆಗೆ ದೊಡ್ಡ ಕೊರತೆಯನ್ನು ಉಳಿಸಿದೆ.

❑



## ಕೆಲವರ ಕಣ್ಣಲ್ಲಿ ಕನ್ನಡದ ಕೀರ್ತಿ....

ಗಂಗವ್ವ ಗಂಗಾಮಾಯಿಗೆ ಅವರು ಬರೆದ ಪ್ರದೀರ್ಘ ಮುನ್ನುಡಿ, ಅವಧೇಶ್ವರಿಗೆ ಬರೆದ ಪ್ರದೀರ್ಘ ವಿಮರ್ಶೆ ಇವೆರಡೂ ನನ್ನ ಮತ್ತು ಅವರ ಸಾಹಿತ್ಯದ ಸಂಬಂಧದ ಎರಡು ತುದಿಗಳನ್ನು ಜೋಡಿಸಿವೆ. ಮೊನ್ನೆ ಧಾರವಾಡದಲ್ಲಿ ಕುಮಾರವ್ಯಾಸನ ಅವರ ಒಂದೂವರೆ ಗಂಟೆಯ ವ್ಯಾಖ್ಯಾನ ತನ್ನ ಶಕ್ತಿ-ಸಾಮರ್ಥ್ಯ ತಿಳುವಳಿಕೆ, ಒಳನೋಟಗಳಿಂದ ನನ್ನನ್ನು ಮುಗ್ಧಗೊಳಿಸಿದವು. ಆದಾಗ್ಯೂ ಅವರ ಪ್ರಥಮ ಆಭಾರ ಮನ್ನಣೆಯ ನಡುಗುವ ದೇಹ ನನಗೆ ನೆನಪಾಗಿ ಕಣ್ಣಲ್ಲಿ ನೀರು ಬಂದವು ಗೆಳೆಯರು ಬೆಳೆಯುತ್ತಾರೆ ಒಂದೊಂದು ಹೆಜ್ಜೆ ಮುಂದಿಟ್ಟು ತೆವಳುತ್ತಾರೆ. ಕೀರ್ತಿಯ ಬೆಳವಣಿಗೆ ಹಾರಿಗ್ಗಾಲ ಓಟ. ಯಾವಾಗ ಯಾವ ಒಳನೋಟವನ್ನು ಸಲೀಸಾಗಿ ಎದುರು ಮಾಡಿ ನಮ್ಮನ್ನು ಚಕಿತರನ್ನಾಗಿ ಮಾಡುವರೋ ಹೇಳಲಾಗದು. ಅವರ ನೇರ ನಿಷ್ಕಪಟ ಬುದ್ಧಿವಂತಿಕೆಗೆ ಮರುಳಾಗದವನು ಹೆಡ್ಡನಿರಬೇಕು ಇಲ್ಲ ಸೊಕ್ಕಿನವನಿರಬೇಕು ಮುಕ್ತ ಮನಸ್ಸಿನ ಅವರ ಚರ್ಚೆ ಕನ್ನಡಿಗರಿಗೆ ಆಸ್ತಿ ಇದ್ದಂತೆ. ನಮ್ಮ ಸ್ನೇಹ, ವಿಶ್ವಾಸ ಉತ್ತರೋತ್ತರ ಬೆಳೆಯುತ್ತಿರಲಿ ಇಷ್ಟೇ ಈ ವಯಸ್ಸಿನಲ್ಲಿ ನಾನು ಬೇಡಿಕೊಂಡ ಪ್ರಾರ್ಥನೆ.

ಶಂಕರಮೊಕಾಶಿ ಪುಣೇಕರ

(ಕನ್ನಡದ ಕೀರ್ತಿ - ಪುಸ್ತಕದಲ್ಲಿ)

ಕುರ್ತಕೋಟಿ ಮೂಲಭೂತವಾಗಿ ದೃಢ ಸಮಾಜದ ಮನುಷ್ಯ. ಇಂಗ್ಲೆಂಡಿನ 18ನೇ ಶತಮಾನದಂಥ ನೆಮ್ಮದಿಯ ಕಿರಿಕಿರಿಯನ್ನುಂಟು ಮಾಡದ ಬದಲಾವಣೆಗಳಿಲ್ಲದ ಸಮಾಜಕ್ಕೆ ಹೇಳಿ ಮಾಡಿಸಿದವರು ಕುರ್ತುಕೋಟಿ. ಅಂದರೆ ಬಗೆ ಬಗೆಯ ಸಾಹಿತಿಗಳು ನಿತ್ಯ ಸೇರಿ ಬೇಂದ್ರೆ ಹಾಗೆ ಕುಮಾರವ್ಯಾಸ ಹೀಗೆ ಮಾವಿನ ಮರದ ವರ್ಣನೆ ಹಾಗಿದೆ ಗರ್ಭಿಣಿಯ ವರ್ಣನೆ ಹೀಗಿದೆ ಎಂದು ಹರಟುವುದು ಕುರ್ತಕೋಟಿಯವರಿಗೆ ಇಷ್ಟ. ಇದೊಂದು ಸುಂದರ ವಾತಾವರಣ. ಇಂಥ ಹರಟೆಗೆ ಬೇಕಾದ ಓದು ನೆನಪು ಜಾಣತನ ಮತ್ತು ಸಹೃದಯರಾದ ಗೆಳೆಯರೆಲ್ಲ ಇದ್ದರೆ ಜೋಶಿಯವರಂಥ ಯಜಮಾನ ಕೂರಲು ಒಳ್ಳೆಯ ಜಾಗವಿದ್ದರೆ ಹತ್ತುಕಪ್ಪು ಚಹಾ ಆಗಾಗ ಉಪ್ಪಿಟ್ಟು ನಡುನಡುವೆ ಮೆಚ್ಚುಗೆಯ ನಗೆ... ನಡುರಾತ್ರಿಯಾದರೂ ಮುಂದುವರಿಯುತ್ತಲೇ ಇರುವ ಸಾಹಿತ್ಯ ಸ್ವಾರಸ್ಯಗಳು ಧಾರವಾಡದಲ್ಲಿ ಬೇಂದ್ರೆಯವರು ಆರಂಭಿಸಿದ ಈ ಹರಟೆ ಚರ್ಚೆಯ ಸಂಪ್ರದಾಯದ ಎಳೆಗಳು ಮಾತ್ರಾ ಇರಬಹುದು... ಎಲ್ಲಕ್ಕಿಂತ ಮುಖ್ಯವಾಗಿ ಸಾಹಿತ್ಯ ಮುಖ್ಯ ಚರ್ಚೆ ಮುಖ್ಯ ಜೀವನ ಮುಖ್ಯ ಎಂದು ತೋರಿಸಿಕೊಟ್ಟಿದ್ದಾರೆ. ಕುರ್ತಕೋಟಿ.

ಪಿ. ಲಂಕೇಶ್

(ಕನ್ನಡದ ಕೀರ್ತಿ)

ಕೀರ್ತಿನಾಥರು ಸಾಮರಸ್ಯವನ್ನು ಗ್ರಹಿಸಿದಷ್ಟು ಸಹಜವಾಗಿ ಸರಾಗವಾಗಿ ವೈರುಧ್ಯಗಳನ್ನು ಸೂಕ್ಷ್ಮ ತಲ್ಲಣಗಳನ್ನು ಆಧುನಿಕ ಸಾಹಿತ್ಯದಲ್ಲಿ ಗ್ರಹಿಸಲಾರರು. ಅದಕ್ಕೇ ಆಧುನಿಕ ಕನ್ನಡದ ಕಾವ್ಯಪರಂಪರೆ ಬಗ್ಗೆ ಕೀರ್ತಿನಾಥರು ಮಹಾಪತಿವ್ರತಾ ಪ್ರತಿಭೆ. ಅದು ಬೇಂದ್ರೆಯವರ ಸೇವೆಯನ್ನು ಮಾತ್ರಾ ಅದ್ಭುತವಾಗಿ ಮಾಡಬಲ್ಲದು ಬೇಂದ್ರೆಯವರ ಹೊರಗೆ ಕೀರ್ತಿನಾಥರ ವಿಮರ್ಶೆಯ ಮಂತ್ರದಂಡ ಮುಟ್ಟಿದ ಕಡೆ ಅಂಥಾ ಜಾದೂ ನಡೆಯುವುದಿಲ್ಲ. ಆದರೆ ಅನಾಧುನಿಕ ಕಾವ್ಯಕ್ಕೆ ಕೀರ್ತಿ ಎದುರಾದಾಗ ನಮಗೆ ಕಾಣದ ನೆಲದ ಮರೆಯ ನಿಧಾನ ಅವರಿಗೆ ಥಟ್ಟಂತ ಹೊಳೆಯುತ್ತದೆ.

ಈ ಹಿನ್ನೆಲೆಯಲ್ಲಿ ಹೇಳುವುದಾದರೆ ಉರಿಯ ನಾಲಗೆ ಭೃಂಗದ ಬೆನ್ನೇರಿ ಹಾರುವ ಕೃತಿ, ಬೇರೆಯವರು ಆ ಒಳನೋಟಗಳನ್ನ ಎರೆಹುಳುಗಳಾಗಿ ಕೊರೆಯುತ್ತಾ ಹೋಗಬೇಕು. ಹಾಗಾದಾಗ ಅದು ಕನ್ನಡದ ಪುಣ್ಯ

ಡಿ.ಆರ್. ನಾಗರಾಜ

(ಸಾಹಿತ್ಯ ಕಥನದಲ್ಲಿ)

ಈ ಅಂಕಣ ಲೇಖನಗಳಲ್ಲಿ ಕನ್ನಡ ಸಂಸ್ಕೃತಿ ಮತ್ತು ಸಾಹಿತ್ಯದ ಅಧ್ಯಯನಕ್ಕಿಂತ ಅಧಿಕವಾಗಿ ಸಂಸ್ಕೃತ ಮತ್ತು ಇಂಗ್ಲಿಷ್ ಸಂಸ್ಕೃತಿಯ ಒಲವೇ ಹೆಚ್ಚು. ಆದರೆ ಅಲ್ಲಲ್ಲಿ ಒಂದಿಷ್ಟು ಕನ್ನಡ ಸಂಸ್ಕೃತಿಯ ಅಧ್ಯಯನದ ವಿಷಯ ಬಂದಿದ್ದರೂ ಅದೂ ಪ್ರಾಸಂಗಿಕವಾಗಿ ಮಾತ್ರ...

ಬೇಂದ್ರೆ ಅವರ ಬಗ್ಗೆ ಎಲ್ಲರಿಗೂ ಗೌರವವಿದೆ. ಬೇಂದ್ರೆ ಕುರ್ತುಕೋಟಿ ಅವರಿಗೆ ಸಾಹಿತ್ಯ ಮನೆದೇವರು ಎಂಬುದೂ ಗೊತ್ತು. ಆದರೆ ಬೇಂದ್ರೆ ಸಾವಿನ ನಂತರ ''ಕನ್ನಡ ಸಾಹಿತ್ಯಲೋಕ ಹಿರಿಯರಿಲ್ಲದ ಮನೆಯಾಗಿದೆ'' ಎನ್ನುವುದು ಅತಿಶಯೋಕ್ತಿಯೇ ಸರಿ. ಬೇಂದ್ರೆ ಅವರೇ ಕುವೆಂಪು ಅವರನ್ನು ಯುಗದ ಕವಿ ಜಗದ ಕವಿ ಎಂದು ಕರೆದಿರುವ ಮಾತಿಗೆ ಅವಮಾನ ಮಾಡಿದಂತೆಯೇ ಸರಿ. ಆದರೆ ಕುರ್ತುಕೋಟಿ ಉತ್ತಮ ವಿಮರ್ಶಕರು ಯಾರೂ ಗುರುತಿಸದ ಅಡಿಗರ ಮೇಲಿನ ನರಸಿಂಹಸ್ವಾಮಿ ಅವರ ಪ್ರಭಾವವನ್ನು ಮುಗುಂ ಆಗಿ ಸೂಚಿಸುತ್ತಾರೆ. ಆಲೂರು ವೆಂಕಟರಾಯರ ಕೈಯಿನ ಪಂಜು ಕಾರಂತರ ಕೈಯಲ್ಲಿ ಬೆಳಗುತ್ತಿದೆ ಎನ್ನುತ್ತಾರೆ...

ಎಲ್ಲಕ್ಕಿಂತ ಮಿಗಿಲಾಗಿ ''ಅಯೋಧ್ಯೆ ಸಂಕೇತದ ಗೆಲವು'' ಎಂಬ ಲೇಖನದಲ್ಲಿ ಕುರ್ತುಕೋಟಿ ಅವರ ಪ್ರತಿಗಾಮಿ ಮನೋಭಾವ ಸ್ಪಷ್ಟವಾಗುತ್ತದೆ. ಕೊನೆಯದಾಗಿ ''ನಾನಾಡುವ ಮಾತಿನಲ್ಲಿ ನನ್ನ ಪೂರ್ವಜನ ದನಿ ಕೇಳದಿದ್ದರೆ ಇತಿಹಾಸ ನನ್ನ ಪಾಲಿಗೆ ಸತ್ತಂತೆ'' ಎನ್ನುವ ಕುರ್ತುಕೋಟಿಯವರ ಮಾತನ್ನೇ ಪರಿಶೀಲಿಸಿ 'ಪೂರ್ವಜರು' ಯಾರು ಎಂದು ಪ್ರಶ್ನಿಸಿಕೊಂಡರೆ 'ಉರಿಯ ನಾಲಿಗೆಯ' ಅವರ ಇತಿಹಾಸದ ಅರ್ಥವಿವರಣೆ ಯಾರಿಗಾದೂ ಸ್ಪಷ್ಟವಾಗುತ್ತದೆ.

ಪ್ರೊ। ಕೆ.ಜಿ. ನಾಗರಾಜಪ್ಪ

'ಉರಿಯ ನಾಲಗೆ' ಕೃತಿ ಕುರಿತು (ಇಕ್ಕಟ್ಟು-ಬಿಕ್ಕಟ್ಟು)

# ಮೂರು ಬೈ ಆರು

ದೇಶಕುಲಕರ್ಣಿ

‘ಅಗೆವಾಗ್ಗೆ ಮೊದಲು ಕೋಶಾವಸ್ಥೆ ಮಣ್ಣು’
ಮಣ್ಣೋ ಕುಂಕುಮ ಭೂಮಿಯೋ
ಅಗೆವ ಗಡಾರಿಗಷ್ಟೇ ಗೊತ್ತು
ಅಗೆವಾಗ್ಗೆ ಸುತ್ತ ನೂರಾರು ಕಣ್ಣು
ಏನಿತ್ತೋ ಇದರೊಳಗೆ ಏನೆಲ್ಲ ಇತ್ತು?
ಅಗೆದಷ್ಟೂ ಸಿಕ್ಕುವದು ಯಾವ ಕಾಲದ್ದೋ ರಾಜಡೌಲು
ಪಾನಮಂದಿರ ಮೇಜು ಪಿಂಗಾಣಿ ಬೌಲು
ಮಹರಾಣಿಯುಟ್ಟು ದಾದಿಗೆ ಕೊಟ್ಟ ಜರತಾರಿ ತುಂಡು
ನರ್ತಕಿಯ ಕೈಜಾರಿ ಒಡೆದ ಗಾಜು ಬಳೆ ಚೂರು
ಅಥವಾ ಸಿಕ್ಕಬಹುದು ಮನೆಸುಟ್ಟ ಬೆಂಕಿ ಕರಕಲು
ಸೊಟ್ಟಗೆ ಬಿದ್ದ ಮಡಕೆ ಕೋಡಲೊಲೆ ಬೂದಿ
ಕೊಟ್ಟಿಗೆಯ ಒಣ ಸಗಣಿ ಸಡಿಲು ಹಗ್ಗದ ಗೂಟ
ಸಿಕ್ಕೀತು ಚಡ್ಡಿ ಹರುಕಿನ ಹುಡುಗ ಎತ್ತೆಸೆದ ಬಚ್ಚ
ಸಿಕ್ಕಲೇ ಬೇಕು ಮೂಳೆ ಮುಂಡಗಳು, ಬರೇ ರುಂಡಗಳು
ಯಾರದೋ ತಿಥಿಯಲ್ಲಿ ಯಾರೋ ಇಟ್ಟು ಮರೆತ ಪಿಂಡಗಳು
ಯಂತ್ರ, ಮಂತ್ರಗಳು ತಂತ್ರ, ಕುತಂತ್ರಗಳು
ಅರ್ಧಕ್ಕೇ ಬಿಟ್ಟ ಪಾಯಗಳು ನೀಲಿ ಕಟ್ಟಿದ ಗಾಯಗಳು
ಕಂಬ ಬಸದಿ ಸ್ತೂಪ ಗುಡಿ-ಗೋಪುರ ಮಿನಾರುಗಳು
ಹರಕೊಂಡ ಸಂಸ್ಕೃತಿಯ ಚಿಂದೀಛಿದ್ರ, ಚೂರುಗಳು
ಅಗೆಯಲೇ ಬೇಕು ಅನ್ನ ನಿದ್ದೆಯ ಬಿಟ್ಟು ಅನವರತ
ಭೂಗೋಲ ವಿಸ್ತರಿಸಿ ಚರಿತ್ರೆಯನ್ನು ಮಗುಚಬೇಕು
ಎಷ್ಟು ಅಗೆದರೂ ಬೇಕು ಇನ್ನೂ ಇನ್ನೂ ಆಳ ಹಳ್ಳ
ಹುಗಿಯಲೇ ಬೇಕಲ್ಲ ‘ಮಾಡಿ ಮಾಡಿದವರನ್ನೆಲ್ಲ ಭರ್ತಿ
ಬರುತ್ತಲೇ ಇದೆ ಬಿಳೀ ಹೊದಿಕೆಯ ಶವದ ಮೆರವಣಿಗೆ
ಅವರವರ ಪಿಂಗಾಣಿ ಜರತಾರಿ ಬಳೆ ಮಡಕೆ ಬಚ್ಚ ಜೊತೆಗೆ
ಬನ್ನಿ ನಮ್ಮ ನಾಗರಿಕತೆಯನ್ನೂ ಹೂಳೋಣ ಇದರೊಳಗೆ
ಮತ್ತೆ ಬರುವವರು ಅಗೆವಾಗ ಸಿಗಲೇ ಬೇಕಲ್ಲ ‘ನಾವು’ ಕೆಳಗೆ
ಅದಕ್ಕೇ ಹೇಳಿದ್ದು ಕಾದಿರಿಸು ಈಗಿಂದೀಗ
ನನಗೊಂದು ನಿನಗೊಂದು
ಮೂರು ಬೈ ಆರರ ಎರಡು ಜಾಗ



# ನನ್ನ ಚಿಕ್ಕಪ್ಪ
# ಕನ್ನಡ ಕಣ್ವ ಬಿ.ಎಂ.ಶ್ರೀ

ಇಂಗ್ಲೀಷ್ ಮೂಲ: ರಾಜೇಶ್ವರಿ ಚಟರ್ಜಿ

ಕನ್ನಡಕ್ಕೆ: ಸೂರಜ್.ಎಸ್



ನನ್ನ ಅಜ್ಜ ಮೈಲಾರಯ್ಯನವರ ಹಿರಿಯ ಪುತ್ರ ಶ್ರೀಕಂಠಯ್ಯ. ಜನವರಿ 3, 1884ರಲ್ಲಿ ತುಮಕೂರು ಜಿಲ್ಲೆಯ ಗುಬ್ಬಿ ತಾಲ್ಲೂಕಿಗೆ ಸೇರಿದ ಸಂಪಿಗೆ ಎಂಬ ಪುಟ್ಟ ಗ್ರಾಮದಲ್ಲಿ ತಾತ ಮಲ್ಲಣ್ಣನವರ ಮನೆಯಲ್ಲಿ ಜನಿಸಿದರು. ಮೊದಲನೆಯ ಹೆರಿಗೆ ತವರಿನಲ್ಲೇ ಆಗಬೇಕು ಎಂಬುದು ಅಂದಿನ ನಂಬಿಕೆ. ಈ ಪದ್ಧತಿ ಇಂದಿಗೂ ಚಾಲ್ತಿಯಲ್ಲುಂಟು. ಸಂಪಿಗೆ ಪುಟ್ಟಗ್ರಾಮ. ಅಲ್ಲಿ ಶ್ರೀ ವೆಂಕಟರಮಣಸ್ವಾಮಿಯ ದೇವಾಲಯವಿದೆ. ಮಲ್ಲಣ್ಣನವರ ಎರಡನೆಯ ಮಗಳು ಭಾಗೀರಥಮ್ಮ ಶ್ರೀಕಂಠಯ್ಯನವರ ತಾಯಿ. ಮಲ್ಲಣ್ಣನವರು ಜೋಡಿದಾರರಾಗಿದ್ದರು. ಸಂಪಿಗೆಯ ಬಳಿ ದೊಡ್ಡದಾದ ಜಮೀನಿನ ಮಾಲೀಕರಾಗಿದ್ದು ಬತ್ತ, ರಾಗಿ ಹಾಗು ತೆಂಗು ಬೆಳೆಯುತ್ತಿದ್ದರು.

1985ರಲ್ಲಿ ಊರಿನ ಜನ ಏರ್ಪಡಿಸಿದ್ದ ನನ್ನ ದೊಡ್ಡಪ್ಪನವರ ಜನ್ಮಶತಾಬ್ಧಿ ಸಮಾರಂಭದ ಸಂದರ್ಭದಲ್ಲಿ ನಾನು ಸಂಪಿಗೆಗೆ ಹೋಗಿದ್ದೆ. ನನ್ನ ತಂದೆಯೂ ನನ್ನ ಸಂಗಡ ಬಂದಿದ್ದರಿಂದ ಅವರ ದಾಯಾದಿ ಜೋಡಿದಾರ್ ಕೃಷ್ಣಮೂರ್ತಿ ಪರಿವಾರದೊಡನೆ ಇಬ್ಬರು ಸ್ವಲ್ಪ ಕಾಲ ಇದ್ದೆವು. ಇವರು ಇದ್ದದ್ದು ನಮ್ಮ ದೊಡ್ಡಪ್ಪ ಹುಟ್ಟಿದ ಮನೆಯಲ್ಲೇ. ಈ ಹೆಂಚಿನ ಮನೆ ಸುಮಾರು ದೊಡ್ಡದಾಗಿದ್ದು, ಎರಡು ಅಡಿ ದಪ್ಪನೆಯ ಮಣ್ಣಿನ ಗೋಡೆಗಳಿಂದ ಬಲಿಷ್ಟವಾಗಿ ಕಟ್ಟಲ್ಪಟ್ಟಿತ್ತು. ಎರಡುನೂರು ವರ್ಷಗಳ ಮನೆಯಾದರೂ ಇನ್ನೂ ಚೆನ್ನಾಗಿ ಕಾಪಾಡಿಕೊಂಡು ಚೊಕ್ಕಟವಾಗಿರಿಸಿಕೊಂಡಿದ್ದರು. ನನ್ನ ದೊಡ್ಡಪ್ಪನವರು ಜನಿಸಿದ ಮುಂಭಾಗದ ಕೊಠಡಿಯನ್ನು ನಮಗೆ ತೋರಿಸಿದರು. ಹಾಗೆಯೇ ಹಿರಿಯ ಮಗಳು ಕಾವೇರಮ್ಮನೂ ಇದೇ ಕೋಣೆಯಲ್ಲಿ ಹುಟ್ಟಿದ್ದು ಎಂದು ತಿಳಿಸಿದರು. ಎರಡನೆಯ ಮಗಳು ನಂಜಮ್ಮ, ನನ್ನ ತಂದೆ ಶಿವರಾಮಯ್ಯ ಮತ್ತು ಅವರ ತಮ್ಮ ಕೃಷ್ಣಸ್ವಾಮಿ, ತಂದೆ ಮೈಲಾರಯ್ಯನವರ ಶ್ರೀರಂಗಪಟ್ಟಣದಲ್ಲಿದ್ದ ಮನೆಯಲ್ಲಿ ಜನಿಸಿದ್ದರು.

ಗಂಡು ಮಗುವಿನ ಜನನ ಎಲ್ಲರಿಗೂ ಸಂತಸ ತಂದಿತ್ತು. ತಂದೆಯು ನಂಜುಂಡೇಶ್ವರನ ಒಕ್ಕಲಾಗಿದ್ದರಿಂದ ಮಗುವಿಗೆ ಶ್ರೀಕಂಠನೆಂದು ನಾಮಕರಣ ಮಾಡಿದರು. ತಾಯಿ ಭಾಗೀರಥಮ್ಮ ಮತ್ತು ಮಗುವು ವರ್ಷದ ತನಕ ಸಂಪಿಗೆಯಲ್ಲೇ ಉಳಿದರು. ಅಜ್ಜಿ ಹಾಗೂ ವಿಧವೆ ದೊಡ್ಡಮ್ಮ ಅಚ್ಚಮ್ಮಣ್ಣಿ ಅವರುಗಳ ಅಕ್ಕರೆ ಆರೈಕೆಗಳಿಂದ ಶ್ರೀಕಂಠನು

ಆರೋಗ್ಯವಂತನಾಗಿ ಬೆಳೆದ. ಮೊದಲನೆಯ ಹುಟ್ಟು ಹಬ್ಬದ ವೇಳೆಗೆ ಸರಿಯಾಗಿ ತಂದೆ ಮೈಲಾರಯ್ಯನವರು ವಕೀಲ ವೃತ್ತಿಯಲ್ಲಿದ್ದ ಶ್ರೀರಂಗಪಟ್ಟಣಕ್ಕೆ ಮಗು ಮತ್ತು ತಾಯಿ ಇಬ್ಬರೂ ತೆರಳಿದರು. ಮಗುವಿನ ಅಕ್ಕರೆ ಹಾಗು ಮನೆಗೆಲಸಗಳಲ್ಲಿ ನೆರವಾಗಲೆಂದು ಅಕ್ಕ ಅಚ್ಚಮ್ಮಣ್ಣಿಯೂ ಇವರೊಂದಿಗೆ ಶ್ರೀರಂಗಪಟ್ಟಣ ಸೇರಿದರು. ಹೊಸ ಉಡುಪುಗಳನ್ನು ತೊಡಿಸಿ ರಾಮಾಶಾಸ್ತ್ರಿಗಳ ಪೌರೋಹಿತ್ಯದಲ್ಲಿ ಮಗು ಶ್ರೀಕಂಠನ ಮೊದಲನೆಯ ಹುಟ್ಟು ಹಬ್ಬ ಬಹಳ ವಿಜೃಂಭಣೆಯಿಂದ ನೆರವೇರಿತು. ಆಪ್ತರೆನಿಸಿದ ಸುಮಾರು ಐವತ್ತು ಮಂದಿ ಬ್ರಾಹ್ಮಣ ಕುಟುಂಬದವರನ್ನು ವಿಶೇಷ ಔತಣಕ್ಕೆಂದು ಆಹ್ವಾನಿಸಿದ್ದರು. ಸಾಮಾನ್ಯವಾಗಿ ಬ್ರಾಹ್ಮಣೇತರ ಸ್ನೇಹಿತರನ್ನು ಇಂತಹ ಔತಣಗಳಿಗೆ ಆಹ್ವಾನಿಸುತ್ತಿರಲಿಲ್ಲ. ಅವರನ್ನೆಲ್ಲ ಆದಿನ ಸಂಜೆ ಪ್ರಾಸಂಗಿಕವಾಗಿ ಬರಮಾಡಿಕೊಂಡು ಹೂವು, ರಸಬಾಳೆ, ಚಕ್ಕುಲಿ, ಬೆಲ್ಲದ ಪುರಿಉಂಡೆಗಳು ಹಾಗು ತಾಂಬುಲಗಳನ್ನು ಕೊಟ್ಟ ಗೌರವಾದರಗಳಿಂದ ಬೀಳ್ಕೊಡುತ್ತಿದ್ದರು.

ಎರಡು ಮೂರು ವರ್ಷದ ಶ್ರೀಕಂಠನು ಎಷ್ಟು ತುಂಟನೆನಿಸಿದ್ದನೆಂದರೆ ಅವನನ್ನು ಸುಧಾರಿಸಲು ಯಾರಿಗೂ ಸಾಧ್ಯವಾಗುತ್ತಿರಲಿಲ್ಲ. ಶ್ರೀಕಂಠನು ಮೂರು ವರ್ಷದವನಾಗಿದ್ದಾಗ ತಾಯಿ ಭಾಗೀರಥಮ್ಮ ಎರಡನೆಯ ಬಾರಿಗೆ ಗರ್ಭ ಧರಿಸಿದಳು. ಐದು ತಿಂಗಳ ಗರ್ಭಿಣಿಯಾದಾಗ ಮೈಲಾರಯ್ಯನವರು ಆಕೆಯನ್ನು, ಅಚ್ಚಮ್ಮಣ್ಣಿಯವರನ್ನು, ಸಂಪಿಗೆಗೆ ಕರೆದೊಯ್ದರು. ಈ ಬಾರಿ ಹೆಣ್ಣು ಮಗುವಾಯಿತು. ಮಗುವಿಗೆ ಕಾವೇರಮ್ಮನೆಂದು ನಾಮಕರಣ ಮಾಡಿದರು. ಪರಿವಾರದವರು ಗಂಡು ಮಗುವಿಗಾಗಿ ಹಂಬಲಿಸಿದ್ದರೂ ಹೆಣ್ಣು ಮಗುವಿನ ಜನನ ಎಲ್ಲರಿಗೂ ಸಂತಸ ತಂದಿತ್ತು. ಕಾವೇರಿ ಮತ್ತು ತಾಯಿಯನ್ನು ಅಚ್ಚಮ್ಮಣ್ಣಿ ಹಾಗು ಅವರ ತಂದೆ ತಾಯಂದಿರು ಬಹಳ ಆರೈಕೆ ಮಾಡಿದರು. ಕಾವೇರಿ ಹತ್ತು ಮಾಸದವಳಾಗಿದ್ದಾಗ ಎಲ್ಲರೂ ಮೈಲಾರಯ್ಯನವರ ಶ್ರೀರಂಗಪಟ್ಟಣದ ಮನೆಗೆ ಹಿಂದಿರುಗಿದರು. ಶ್ರೀಕಂಠನಿಗೆ ಐದು ವರ್ಷಗಳು ತುಂಬಿದ್ದಾಗ ತಂದೆ ಮೈಲಾರಯ್ಯನವರು ಮಗನಿಗೆ ಕನ್ನಡ ಹಾಗು ಸಂಸ್ಕೃತ ಭಾಷೆಗಳನ್ನು ಬೋಧಿಸುವ ಸಲುವಾಗಿ ಒಬ್ಬ ಅಧ್ಯಾಪಕರನ್ನು ಗೊತ್ತು ಮಾಡಿದರು. ಶ್ರೀಕಂಠನು ತುಂಬ ಬುದ್ಧಿವಂತನಾಗಿದ್ದು ಎರಡೂ ಭಾಷೆಗಳನ್ನು ಬಹು ಬೇಗನೆ ಅರಗಿಸಿಕೊಂಡನಾದರೂ ತನ್ನ ತುಂಟತನಕ್ಕೆ ಲಗಾಮು ಹಾಕಲಿಲ್ಲ ಮಗನ ತುಂಟತನದ ಪ್ರಕರಣಗಳನ್ನು ತಂದೆ ಮೈಲಾರಯ್ಯನವರ ಹತ್ತಿರ ಮೇಷ್ಟರು ವರದಿ ಒಪ್ಪಿಸಿದಾಗಲೆಲ್ಲ ಶ್ರೀಕಂಠನಿಗೆ ಬೆತ್ತದ ಸೇವೆಯಾಗುತ್ತಿತ್ತು. ಆದರೆ ಏಟು ತಿಂದ ಶ್ರೀಕಂಠನು ನಗುತ್ತ ಓಡಿ ಬಿಡುತ್ತಿದ್ದನು.

ಶ್ರೀಕಂಠನು ಆರು ವರ್ಷದವನಾಗಿದ್ದಾಗ ತಂದೆ ಅವನನ್ನು ಸರ್ಕಾರಿ ಪ್ರಾರ್ಥಮಿಕ ಶಾಲೆಗೆ ಸೇರಿಸಿದರು. ಅಲ್ಲಿ ತನ್ನ ಉಪಾಧ್ಯಾಯರುಗಳು ಹೇಳಿಕೊಟ್ಟದ್ದೆಲ್ಲವನ್ನೂ ಚೆನ್ನಾಗಿ ಕಲಿತರೂ ಸಮವಯಸ್ಸಿನ ಕೆಲ ತುಂಟ ಹುಡುಗರ ಗುಂಪಿಗೆ ನಾಯಕನೆನಿಸಿಕೊಂಡನು. ಸುಬ್ಬರಾವ್, ಅಣ್ಣಾಜಿರಾವ್, ವೆಂಕಟಸುಬ್ಬರಾವ್, ವರದಾಚಾರ್, ನರಸಿಂಹಯ್ಯ ಈ ಗುಂಪಿನಲ್ಲಿದ್ದ ಕೆಲ ಹುಡುಗರು. ಹುಡುಗರ ಗುಂಪು ಶಾಲೆ ಮುಗಿದ ಮೇಲೆ ತಮ್ಮ ಮನೆಗಳಿಗೆ ಹಿಂದಿರುಗುತ್ತಿರಲಿಲ್ಲ, ಬದಲಾಗಿ ಕಾವೇರಿ ತೀರದಲ್ಲಿದ್ದ ಟಿಪ್ಪುವಿನ ಪಾಳು ಬಿದ್ದ

ನೆಲಮಾಳಿಗೆಗಳಲ್ಲಿ ಇವರ ಶೋಧನೆಯ ಕಾರ್ಯ ಜರುಗುತ್ತಿತ್ತು! ಶ್ರೀರಂಗಪಟ್ಟಣವನ್ನು ಸುತ್ತುವರಿದಿದ್ದ ಹಣ್ಣಿನ ತೋಟಗಳಿಗೆ ನುಗ್ಗಿ ಹುಳಿಮಾವು, ಸೀಬೆಹಣ್ಣು, ಅಂಜೂರಗಳನ್ನು ಕದಿಯುತ್ತಿದ್ದರು. ತೋಟ ಕಾಯುವವರು ಈ ಪುಟ್ಟ ಕಳ್ಳರನ್ನು ಹಿಡಿಯಲಾಗುತ್ತಲೇ ಇರಲಿಲ್ಲ. ಶ್ರೀಕಂಠನು ಗುಂಪಿನ ನಾಯಕನೆನಿಸಿದ್ದರೂ ಇವರೆಲ್ಲರಿಗೂ ಅಚ್ಚುಮೆಚ್ಚು. ಒಮ್ಮೆ ರಜಾ ದಿನದಂದು ಶ್ರೀಕಂಠ ಮತ್ತು ಅವನ ಗೆಳೆಯರು ತಮ್ಮ ಚೇಷ್ಟೆಗೆ 'ಪುಂಡಮಾಮ' ನನ್ನು ಬಲಿಪಶುವನ್ನಾಗಿಸಿದರು! ಪ್ರಸಿದ್ಧ ರಂಗನಾಥಸ್ವಾಮಿ ದೇವಾಲಯದ ಎದುರಿಗಿದ್ದ ವಿಶಾಲ ಹೊರಾಂಗಣದಲ್ಲಿ ಒಂದು ಹಳ್ಳ ತೋಡಿಟ್ಟರು. 'ಪುಂಡಮಾಮ' ನನ್ನು ಅದರಲ್ಲಿ ಕೂರಲು ಹೇಳಿಕೊಟ್ಟರು. ಹಳ್ಳಕ್ಕಿಳಿದ ಅವನನ್ನು ಕತ್ತಿನವರೆಗೆ ಬಿಡಿ ಮಣ್ಣಿನಿಂದ ತುಂಬಿಸಿ ಬರಿ ತಲೆ ಕಾಣುವಂತೆ ಮಾಡಿದರು. ಇಷ್ಟಕ್ಕೆ ನಿಲ್ಲಿಸದೆ, 'ಪುಂಡಮಾಮ'ನೇ ತಮ್ಮ ದೇವರೆಂದು, ಅವನ ಪೂಜೆಗೆಂದು ಹೂವುಹಣ್ಣು ತರಲು ಓಡಿದರು. ಇತ್ತ ಬೀದಿಯಲ್ಲಿ ಹೋಗುತ್ತಿದ್ದ ಕೆಲವರು 'ಪುಂಡಮಾಮ'ನನ್ನು ಕಂಡರು. ಹುಡುಗನು ಉಸಿರಾಡಲು ಹೆಣಗುತ್ತಿದ್ದುದನ್ನು ಕಂಡು ಅವನನ್ನು ಮೇಲೆತ್ತಿ ವೈದ್ಯರಿಗೆ ಬರಹೇಳಿದರು. ಹಿಗ್ಗುತ್ತ ಹಿಂದಿರುಗಿದ ಗೆಳೆಯರು ಪುಂಡಮಾಮನನ್ನು ಕಂಡು ಹೆದರಿ ಅಳಲಾರಂಭಿಸಿದರು. ವೈದ್ಯರು 'ಪುಂಡಮಾಮ' ನನ್ನು ಗುಣ ಪಡಿಸಿದರು. ಸ್ನೇಹಿತನು ಸರಿಹೋದ ನಂತರ ಗೆಳೆಯರೆಲ್ಲರೂ ಪೂಜೆಗೆಂದು ತಂದಿದ್ದ ಹಣ್ಣನ್ನು ತಿಂದು ಸಂತಸಪಟ್ಟರು.

ಹುಡುಗರೆಲ್ಲರೂ ಪ್ರಾಥಮಿಕ ಶಿಕ್ಷಣ ಮುಗಿಸಿದೊಡನೆಯೇ ತಮ್ಮ ಪ್ರೌಢ ಶಿಕ್ಷಣಕ್ಕೆಂದು ಮೈಸೂರಿಗೆ ರವಾನೆಗೊಂಡರು. ಶ್ರೀರಂಗಪಟ್ಟಣದಿಂದ ಮೈಸೂರಿಗೆ ರೈಲಿನಲ್ಲಿ ಸುಮಾರು ಒಂದು ಘಂಟೆ ಕಾಲದ ಪ್ರಯಾಣ. ಮುಂದಿನ ಮೂರು ಸಂವತ್ಸರಗಳಲ್ಲಿ ಗುಂಪಿನ ಎಲ್ಲ ಹುಡುಗರು ತಮ್ಮ ಮೆಟ್ರಿಕ್ಯುಲೇಷನ್ ಪರೀಕ್ಷೆಯನ್ನು ಸಫಲವಾಗಿ ಮುಗಿಸಿಕೊಂಡರು. ಅದರ ಮುಂದಿನ ಒಂದು ವರ್ಷದಲ್ಲಿ ವಿಶ್ವವಿದ್ಯಾನಿಲಯದ ಪ್ರವೇಶ ಪರೀಕ್ಷೆಯನ್ನು ಮುಗಿಸಿ ಕೊಂಡರು. ಅಷ್ಟು ಹೊತ್ತಿಗಾಗಲೇ ತಂದೆ ತಾಯಿಗಳು ದೇವಮ್ಮನೆಂಬ ಹನ್ನೆರಡು ವಯಸ್ಸಿನ ಹೆಣ್ಣುಮಗಳೊಂದಿಗೆ ಶ್ರೀಕಂಠಯ್ಯನ ಲಗ್ನ ನಿಶ್ಚಯಗೊಳಿಸಿದ್ದರು. ದೇವಮ್ಮ ಬೆಳ್ಳೂರು ರಾಮಸ್ವಾಮಯ್ಯನವರ ಹಿರಿಯ ಮಗಳು. ರಾಮಸ್ವಾಮಯ್ಯನವರು ಮೈಲಾರಯ್ಯನವರ ಸ್ನೇಹಿತರು. ಸರ್ಕಾರಿ ಅಧಿಕಾರಿಯಾಗಿ ಸೇವೆಯಲ್ಲಿದ್ದರು. ಇವರು ಕೂಡ ಕನ್ನಡ ಸ್ಮಾರ್ತ ಬ್ರಾಹ್ಮಣ ಜನಾಂಗದ ಬಬ್ಬುರುಕಮ್ಮೆ ಪಂಗಡದವರಾಗಿದ್ದರು. ದೇವಮ್ಮ ಪ್ರಾಥಮಿಕ ಶಿಕ್ಷಣ ಪಡೆದಿದ್ದಳು. ಕನ್ನಡ ಭಾಷೆಯಲ್ಲಿ ಉನ್ನತ ಜ್ಞಾನ ಪಡೆದಿದ್ದು, ಇಂಗ್ಲಿಷ್ ಭಾಷೆಯ ಪ್ರಭಾವಕ್ಕೂ ಒಳಪಟ್ಟಿದ್ದಳು. ಇವರೊಂದಿಗೆ ಸಂಗೀತ ಸರಸ್ವತಿಯನ್ನು ಒಲಿಸಿಕೊಂಡಿದ್ದಳು. ಅಂದಿನ ದಿನಗಳಲ್ಲಿ ಹೆಣ್ಣುಮಕ್ಕಳಿಗೆ ಹನ್ನೆರಡು ಇಲ್ಲವೆ ಇನ್ನೂ ಕಡಿಮೆ ವಯಸ್ಸಿಗೇ ಮದುವೆ ಮಾಡಿ ಬಿಡುತ್ತಿದ್ದರಿಂದ ಇದಕ್ಕಿಂತ ಹೆಚ್ಚು ಶಿಕ್ಷಣ ಪಡೆದಿದ್ದ ಹೆಣ್ಣುಮಗಳು ಸಿಗುವುದು ಸಾಧ್ಯವಿರಲಿಲ್ಲ. ಮದುವೆಯಾಯ್ತು. ದೇವಮ್ಮನಿಗೆ ಹದಿನಾಲ್ಕು ತುಂಬಿ ಪ್ರೌಢಾವಸ್ಥೆಗೆ ಬಂದ ಮೇಲೆ ತನ್ನ ಮಾವನ ಮನೆಗೆ ಬಂದಳು. ಶ್ರೀಕಂಠಯ್ಯನಿಗೆ ಹೆಂಡತಿಯು ಪ್ರೀತಿ ಪರವಾಗಿ, ಒಳ್ಳೆಯ ಸ್ವಭಾವದವಳಾಗಿ ಕಂಡಳು. ಸ್ನಾತಕ ಪದವಿಗಾಗಿ ಶ್ರೀಕಂಠಯ್ಯನವರು ಬೆಂಗಳೂರಿನ

ಸೆಂಟ್ರಲ್ ಕಾಲೇಜಿಗೆ ಸೇರಿಕೊಂಡರು. ವಾರಾಂತ್ಯಗಳಲ್ಲಿ ಹಾಗು ಇತರ ರಜಾದಿನಗಳಲ್ಲಿ ತಮ್ಮ ಪರಿವಾರವನ್ನು ಕಾಣಲು ಹಿಂದಿರುಗುತ್ತಿದ್ದರು. ಆ ದಿನಗಳಲ್ಲಿ ಬಸ್ಸುಗಳು ಇರಲಿಲ್ಲವಾದ್ದರಿಂದ ರೈಲಿನಲ್ಲಿಯೇ ಮೂರು ಘಂಟೆಗಳ ಕಾಲ ಪ್ರಯಾಣ ನಡೆಸಬೇಕಿತ್ತು.

ಮದ್ರಾಸು ವಿಶ್ವವಿದ್ಯಾನಿಲಯದ ವತಿಯಿಂದ ಇಂಗ್ಲಿಷ್ ಸಾಹಿತ್ಯದಲ್ಲಿ ಸ್ನಾತಕ ಹಾಗು ಸ್ನಾತಕೋತ್ತರ ಪದವಿಗಳನ್ನು ಪಡೆದ ನಂತರ ನ್ಯಾಯಶಾಸ್ತ್ರದಲ್ಲಿ ಪದವಿ ಪಡೆದು ತಂದೆಯಂತೆ ವಕೀಲನಾಗಬೇಕೆಂಬ ಹೆಬ್ಬಯಕೆ ಶ್ರೀಕಂಠಯ್ಯನವರನ್ನು ಕಾಡತೊಡಗಿತು. ತರಗತಿಗಳು ನಡೆಯುತ್ತಿದ್ದ ಮದ್ರಾಸಿನ ಪ್ರೆಸಿಡೆನ್ಸಿ ಕಾಲೇಜಿನ ಹತ್ತಿರವೇ ತನ್ನ ಮೈಸೂರಿನ ಗೆಳೆಯರ ಜೊತೆಗೂಡಿ ಬಾಡಿಗೆ ಮನೆಯೊಂದನ್ನು ಗೊತ್ತು ಪಡಿಸಿಕೊಂಡು ಅಲ್ಲಿ ವಾಸಿಸಲು ಆರಂಭಿಸಿದರು. ಸಂಜೆಗಳಲ್ಲಿ ಗೆಳೆಯರೊಡಗೂಡಿ ಮರೀನ ಕಡಲು ತೀರಕ್ಕೆ ನಡೆದು ಹೋಗುತ್ತಿದ್ದರು. ಅಲ್ಲಿ ಮರಳಿನ ಮೇಲೆ ಕುಳಿತು ಅನೇಕ ವಿಷಯಗಳ ಬಗೆಗೆ ಚರ್ಚೆ ಮಾಡುವುದು ಸ್ನೇಹಿತರ ಅಭ್ಯಾಸವಾಯಿತು. ಇಂಗ್ಲಿಷ್ ಸಾಹಿತ್ಯ, ಇಂಗ್ಲಿಷ್ ಕವಿತೆಗಳು, ಇಂಗ್ಲಿಷ್ ಕವಿಗಳು, ಕರ್ತೃಗಳು ಚರ್ಚಾ ವಿಷಯಗಳಾಗಿರುತ್ತಿದ್ದವು. ಈ ಗೆಳೆಯರಿಗೆ ಇಂಗ್ಲಿಷ್ ಸಾಹಿತ್ಯ, ಇಂಗ್ಲೀಷರ ಯೋಚನೆಗಳು ಬಹಳ ಆಕರ್ಷಕವಾಗಿ ಕಂಡಿತ್ತು. ತಮ್ಮ ಹಿರಿಯರೆಲ್ಲರೂ ಹೈಸ್ಕೂಲಿನ ಹಂತದಲ್ಲಷ್ಟೆ ಈ ಪರಭಾಷೆಯನ್ನು ಕಲಿಯಲಾರಂಭಿಸಿದ್ದರೂ ಇಂಗ್ಲಿಷ್ ಭಾಷೆಗೆ, ಜನರಿಗೆ ಅವರ ರೀತಿಗಳಿಗೆ ಪ್ರಭಾವಿತರಾಗತೊಡಗಿದ ಪ್ರಥಮ ಪೀಳಿಗೆ ಇವರದಾಗಿತ್ತು.

ಶ್ರೀಕಂಠಯ್ಯನವರು ಇಂಗ್ಲಿಷ್ ಸಾಹಿತ್ಯ ಹಾಗು ನ್ಯಾಯಶಾಸ್ತ್ರದಲ್ಲಿ ತಮ್ಮ ಸ್ನಾತಕೋತ್ತರ ಪದವಿಗಳನ್ನು ಪಡೆದುಕೊಂಡು ಬಂದು ಶ್ರೀರಂಗಪಟ್ಟಣದಲ್ಲಿ ಇಳಿದಾಗ ತಂದೆ ಹಾಸಿಗೆ ಹಿಡಿದಿದ್ದರು. ಮುಂದಿನ ಕೆಲವು ತಿಂಗಳುಗಳಲ್ಲೆ ಅವರು ದೈವಾಧೀನರಾದರು. ಅಷ್ಟುಹೊತ್ತಿಗೆ ಶ್ರೀಕಂಠಯ್ಯನವರ ಇಬ್ಬರು ಸೋದರಿಯರಾದ ಕಾವೇರಮ್ಮ ಮತ್ತು ನಂಜಮ್ಮನವರು ಮದುವೆಯಾಗಿ ತಮ್ಮ ಪತಿಯ ಪರಿವಾರದೊಂದಿಗೆ ವಾಸವಾಗಿದ್ದರು. ಆದರೆ ಇನ್ನು ಶಾಲೆಯಲ್ಲಿ ಓದುತ್ತಿದ್ದ ಇಬ್ಬರು ತಮ್ಮಂದಿರಾದ ಶಿವರಾಮು (ನನ್ನ ತಂದೆ) ಹಾಗು ಕಿಟ್ಟು (ಕೃಷ್ಣಸ್ವಾಮಿ) ತನ್ನೊಂದಿಗಿದ್ದರು. ಇವರಿಬ್ಬರ ಜವಾಬ್ದಾರಿ ಈಗ ಪೂರ್ತಿಯಾಗಿ ಶ್ರೀಕಂಠಯ್ಯನವರದಾಗಿತ್ತು. ಇದರ ಸಲುವಾಗಿಯೇ ಒಂದು ಸೂಕ್ತವೆನಿಸುವ ಕೆಲಸವನ್ನು ಹುಡುಕಲಾರಂಭಿಸಿದರು. ಮೈಸೂರು ವಿಶ್ವವಿದ್ಯಾನಿಲಯಕ್ಕೆ ಕೆಲಸಕ್ಕೆಂದು ಅರ್ಜಿ ಸಲ್ಲಿಸಿದರು. ಇಂಗ್ಲಿಷ್‌ನಲ್ಲಿ ಉತ್ತಮ ಸ್ನಾತಕೋತ್ತರ ಪದವಿ ಪಡೆದಿದ್ದ ಶ್ರೀಕಂಠಯ್ಯನವರನ್ನು ಪ್ರಾಧ್ಯಾಪಕರಾಗಿ ನೇಮಕ ಮಾಡಿಕೊಳ್ಳಲು ವಿಶ್ವವಿದ್ಯಾನಿಲಯದವರು ಕಾತುರರಾಗಿದ್ದರು. ಶ್ರೀಕಂಠಯ್ಯನವರು ಮಹಾರಾಜ ಕಾಲೇಜು, ಮೈಸೂರಿನಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿ ವೃತ್ತಿ ಆರಂಭಿಸಿದರು. ತಂದೆಯ ಅಪೇಕ್ಷೆಯಂತೆ ವಕೀಲನಾಗುವುದಕ್ಕಿಂತ ಪರಿಸ್ಥಿತಿಗೆ ಹೊಂದುವ ಶಿಕ್ಷಣ ವೃತ್ತಿಯು ತೃಪ್ತಿ ತಂದಿತ್ತು. ಪರಿವಾರ ಸಮೇತರಾಗಿ ಮೈಸೂರಿಗೆ ಬಂದಿಳಿದದ್ದೂ ಆಯಿತು. ಶ್ರೀಕಂಠಯ್ಯನವರಿಗೆ ಪರಿವಾರದ ಎಲ್ಲ ವೆಚ್ಚಗಳನ್ನು ಪೂರೈಸುವಷ್ಟು ಹಣ ಮಾತ್ರ ಸಂಬಳದ ರೂಪದಲ್ಲಿ ದೊರಕುತ್ತಿತ್ತು. ಮಹಾರಾಜ ಕಾಲೇಜಿನಿಂದ ಕಾಲ್ನಡಿಗೆಯ

ದೂರದಲ್ಲಿದ್ದ ಒಳ್ಳೆಯ ಬಡಾವಣೆಯಲ್ಲಿ ಒಂದು ಸಣ್ಣ ಬಾಡಿಗೆ ಮನೆಯಲ್ಲಿ ವಾಸಿಸತೊಡಗಿದರು. ಸ್ನಾತಕ ಪದವಿ ಕ್ರಮದಲ್ಲಿ ಪ್ರಾಥಮಿಕ, ಪ್ರೌಢ ಎರಡು ತರಗತಿಗಳಿಗೆ ಇಂಗ್ಲಿಷ್ ಗದ್ಯ, ನಾಟಕ ಮತ್ತು ಕಾವ್ಯ ಮಾಲೆಗಳನ್ನು ಹೇಳಿಕೊಡಬೇಕೆಂದು ಆಡಳಿತದವರು ಕೇಳಿಕೊಂಡರು. ಶ್ರೀಕಂಠಯ್ಯನವರಿಗೆ ಕೆಲಸದಿಂದ ಬಿಡುವು ಸಿಗುತ್ತಿರಲಿಲ್ಲ. ಮನೆಯ ನಿರ್ವಹಣೆಯ ಜವಾಬ್ದಾರಿ ಮನೆಯ ಹೆಂಗಸರು ಪೂರ್ತಿಯಾಗಿ ವಹಿಸಿಕೊಂಡುಬಿಟ್ಟಿದ್ದರು.

ಬೇಸಿಗೆ ರಜೆ ಬಂತೆಂದರೆ ಎಲ್ಲರೂ ಹೀರೋಡಿನ ತೋಟದ ಮನೆಗೆ ಹೊರಟು ಬಿಡುತ್ತಿದ್ದರು. ಹೀರೋಡು ಮೈಸೂರಿನಿಂದ ಸುಮಾರು ಮೂವತ್ತು ಮೈಲಿ ದೂರದಲ್ಲಿದ್ದ ಊರು. ಇಲ್ಲಿ ಮೈಲಾರಯ್ಯನವರು ಸೊಗಸಾದ ಮನೆಯೊಂದನ್ನು ಕಟ್ಟಿಸಿದ್ದರು. ಮನೆಯ ಸುತ್ತಲೂ ಮಾವಿನ ಮರಗಳಿದ್ದ ಈ ತೋಟದ ಮನೆ ಇವರೆಲ್ಲರಿಗೆ ಬೇಸಿಗೆಯ ಅರಮನೆ. ಶ್ರೀಕಂಠಯ್ಯನವರು ತೋಟದ ಮನೆಯಲ್ಲೂ ತಮ್ಮ ಬಹಳಷ್ಟು ಸಮಯವನ್ನು ಓದುವುದರಲ್ಲಿ ಹಾಗು ತರಗತಿಗೆ ಅಣಿ ಮಾಡಿಕೊಳ್ಳುವುದರಲ್ಲೆ ಕಳೆಯುತ್ತಿದ್ದರು. ಯಾವುದೇ ಗೊಂದಲ ಉಂಟಾಗಬಾರದು ಎಂದು ತೋಟದ ಹತ್ತಿರವಿದ್ದ ಕಗ್ಗಲ್ಲಿನ ಗುಡ್ಡದ ಮೇಲೆ ಕೂತು ಓದಿಕೊಳ್ಳುತ್ತಿದ್ದರು.

ಮುಂದಿನ ಐದು ವರ್ಷಗಳಲ್ಲಿ ದೇವಮ್ಮನು ಶಾರದೆ, ತಮ್ಮಯ್ಯ ಹಾಗು ತಂಗ ಎಂಬ ಮೂರು ಮಕ್ಕಳಿಗೆ ಜನ್ಮವಿತ್ತಳು. ಪರಿವಾರದವರಿಗೆಲ್ಲ ಇದು ಸಂಭ್ರಮದ ಕಾಲವಾಗಿತ್ತು. ಭಾಗಿರಥಮ್ಮ ಮತ್ತು ಅಚ್ಚಮ್ಮಣ್ಣಯವರಿಗೆ ಮಕ್ಕಳನ್ನು ಪೋಷಿಸುತ್ತಿದ್ದ ದೇವಮ್ಮನಿಗೆ ಸಹಾಯ ಮಾಡುವುದರಲ್ಲೆ ಸಂತೋಷ, ತೃಪ್ತಿ. ಮಹಾರಾಜ ಕಾಲೇಜಿನಲ್ಲಿ ಓದುತ್ತಿದ್ದ ನನ್ನ ತಂದೆ ಹಾಗು ಚಿಕ್ಕಪ್ಪ ಈ ಮಕ್ಕಳೊಂದಿಗೆ ಆಟವಾಡಿಕೊಂಡಿರುತ್ತಿದ್ದರು. ಅಣ್ಣ ಶ್ರೀಕಂಠಯ್ಯ ಅಂಗಡಿಯಿಂದ ದಿನಸಿ ತರುವ ಕೆಲಸವನ್ನು ಇಬ್ಬರು ತಮ್ಮಂದಿರಿಗೆ ಒಪ್ಪಿಸಿದ್ದರು. ಆಗಿನ ದಿನಗಳಲ್ಲಿ ಹೆಂಗಸರು ಈ ಕೆಲಸಗಳಿಗೆಂದು ಹೊರಗೆ ಹೋಗುತ್ತಿರಲಿಲ್ಲ. ಹೀಗೆ ದಿನಸಿ ತರಲು ಹೋದಾಗ ತಿಂಡಿ ತಿನಿಸಿಗೆಂದು ಸ್ವಲ್ಪ ಹಣ ಖರ್ಚು ಮಾಡಬಹುದೆಂದು ಅಣ್ಣನು ಅನುಮತಿ ಕೊಟ್ಟಿದ್ದರೂ ಲೆಕ್ಕವನ್ನು ಚಾಚು ತಪ್ಪದೆ ಹಾಗೇ ಒಪ್ಪಿಸಬೇಕಿತ್ತು.

ಸಂತೋಷದಿಂದಿದ್ದ ಈ ಪರಿವಾರದಲ್ಲಿ ಆಕಸ್ಮಿಕವಾಗಿ ಒಂದು ದುರಂತ ನಡೆದು ಹೋಯಿತು. ಹಿರಿಯ ಮಗಳು ಶಾರದೆ ಮೂರು ವರ್ಷ ತುಂಬಿತ್ತು. ತಮ್ಮಯ್ಯ ಸುಮಾರು ಒಂದೂವರೆ ವರ್ಷದವನು ತಂಗಿ ಅವನಿಗಿಂತ ಚಿಕ್ಕವಳು. ಬೇಸಿಗೆ ರಜೆಗೆಂದು ಹೀರೋಡಿನ ತೋಟದ ಮನೆಗೆ ಎಲ್ಲರೂ ಹೋಗಿದ್ದರು. ಅಲ್ಲಿ ಮಕ್ಕಳಿಗೆ ಕೆಂಗಣ್ಣು ಬೇನೆ ತಗುಲಿತು. ಶ್ರೀಕಂಠಯ್ಯನವರು ಒಳ್ಳೆಯ ವೈದ್ಯರ ಅಭಿಪ್ರಾಯ ಪಡೆದು ಬರುತ್ತೇನೆಂದು ಕೂಡಲೆ ಮೈಸೂರಿಗೆ ಹೊರಟರು. ಮೈಲು ತುತ್ತದ ಪುಡಿಯನ್ನು ಒಂದು ಚಿಟಕಿಯಷ್ಟು ಕಣ್ಣಿಗೆ ಹಾಕಿದರೆ ಬೇನೆ ನಿವಾರಣೆಯಾಗುವುದೆಂದು ವೈದ್ಯರು ಸೂಚನೆ ಇತ್ತು ಕಳುಹಿಸಿದರು. ಪುಡಿಯನ್ನು ಹೊತ್ತು ಶ್ರೀಕಂಠಯ್ಯನವರು ತೋಟದ ಮನೆಗೆ ಹಿಂದಿರುಗಿದರು. ತಂದಿದ್ದ ಮದ್ದನ್ನು ದೇವಮ್ಮ ಮತ್ತು ತನ್ನ ದೊಡ್ಡಮ್ಮನ ಕೈಗಿತ್ತು ಹೇಗೆ ಉಪಯೋಗಿಸಬೇಕೆಂದು ಹೇಳಿ ಅತ್ತ ಹೊರಟು ಹೋದರು. ಇಬ್ಬರೂ ಮಕ್ಕಳಿಗೆ ಚಿಕಿತ್ಸೆ ನೀಡಿದರು. ಶಾರದ ಹಾಗು ತಂಗ ಚಿಕಿತ್ಸೆಗೆ

ಸಹಕರಿಸಿದರು. ಆದರೆ ತಮ್ಮಯ್ಯನು ಮಾತ್ರ ಪುಡಿ ಹಾಕುವಾಗ ಸುಮ್ಮನೆ ಕೂರದೆ ಕೈಕಾಲುಗಳನ್ನೆತ್ತಿ ಹಾಕುತ್ತ ರೋಧಿಸಲಾರಂಭಿಸಿದನು. ಗಲಾಟೆಯಲ್ಲಿ ದೇವಮ್ಮನ ಕೈಯಿಂದ ಸೂಚಿಸಿದ್ದಕ್ಕಿಂತ ಹೆಚ್ಚು ಔಷಧಿ ಕಣ್ಣುಗಳನ್ನು ಹೊಕ್ಕಿತು. ಹೆಣ್ಣುಮಕ್ಕಳಿಗೆ ಸ್ವಲ್ಪ ಗುಣವಾದರೂ ಒಂದು ದಿನದಷ್ಟು ಹೊತ್ತಿನಲ್ಲಿಯೇ ತಮ್ಮಯ್ಯನ ಕಣ್ಣುಗಳು ಕೆಂಪೇರಿ ತಡೆಯಲಾರದ ಬೇನೆ ಉಂಟಾಯಿತು. ಇದನ್ನು ಕಂಡು ಗಾಬರಿಗೊಂಡ ಶ್ರೀಕಂಠಯ್ಯನವರು ತಮ್ಮಯ್ಯನನ್ನು ಅಂದೆ ಮದರಾಸಿಗೆ ಕರೆದುಕೊಂಡು ಹೊರಟರು. ಮದರಾಸಿನ ಪ್ರಸಿದ್ಧ ನೇತ್ರತಜ್ಞ ಬ್ರಿಟಿಷ್ ವೈದ್ಯರೊಬ್ಬರು ಶ್ರೀಕಂಠಯ್ಯನವರಿಗೆ ಪರಿಚಯದವರಾಗಿದ್ದರು. ತಮ್ಮಯ್ಯನನ್ನು ಪರೀಕ್ಷೆ ಮಾಡಿದ ಅವರು 'ಹುಡುಗನ ದೃಷ್ಟಿ ಮರಳಲು ಯಾವ ಸಾಧ್ಯತೆಗಳೂ ಇಲ್ಲ' ಎಂದು ಬಿಟ್ಟರು ಶ್ರೀಕಂಠಯ್ಯನವರಿಗೆ ಈ ಆಘಾತ ತಡೆಯಲಾಗಲಿಲ್ಲ. ಮಗನ ದುರದೃಷ್ಟವನ್ನು ನೆನೆದು ಒಮ್ಮೆಲೆ ಅತ್ತುಬಿಟ್ಟರು. ಅಂದು ಅವರನ್ನು ದೇವಮ್ಮನನ್ನು ಯಾರಿಂದಲು ಸಂತೈಸಲಾಗಲಿಲ್ಲ ಎಂದು ನನ್ನ ತಂದೆ ನನ್ನ ಬಳಿ ಹೇಳಿದ್ದುಂಟು.

ಇಷ್ಟಾದರೂ ದಿನಗಳು ಎಂದಿನಂತೆ ಸಾಗಲಾರಂಭಿಸಿದ್ದವು./ ಮುಂದಿನ ವರ್ಷದಲ್ಲಿ ದೇವಮ್ಮ ಮತ್ತೊಂದು ಮಗುವಿಗೆ ಜನ್ಮವಿತ್ತಳು. ದುರ್ದೈವ ಪರಿವಾರವನ್ನಾವರಿಸಿತ್ತೆನಿಸುತ್ತದೆ. ತಾಯಿ ಮಗುವಿಗಿಬ್ಬರಿಗೂ ಜ್ವರ ಅಂಟುಕೊಂಡಿತು. ಹದಿನೈದು ದಿನಗಳಷ್ಟೆ ಆಗಿದ್ದವು. ನಿರಂತರ ಜ್ವರದಿಂದ ಎರಡು ಜೀವಗಳು ಅಸುನೀಗಿದವು. ಮೈಸೂರಿನ ಕಾಲೇಜಿನಲ್ಲಿ ಓದುತ್ತಿದ್ದ ನನ್ನ ತಂದೆ ತಕ್ಷಣ ಹೀರೋಡಿಗೆ ಹೊರಟರು. ಅಲ್ಲಿನ ಸಂದರ್ಭದ ಅರಿವಾಗುತ್ತಲೆ ದುಃಖ ತಡಿಯಲಾಗದೆ ಕಣ್ಣೀರಿಟ್ಟರು. ಆದರೆ ಶ್ರೀಕಂಠಯ್ಯನವರು ಭಾವ ಹೀನರಾಗಿ ಶಾಂತರಾಗಿರುವುದನ್ನು ಕಂಡು ತಮ್ಮನಿಗೆ ಅವರ ಈ ವರ್ತನೆ ಅರ್ಥೈಸಲೇ ಆಗಲಿಲ್ಲ. ಶ್ರೀಕಂಠಯ್ಯನವರಿಗೆ ಇದು ನಿರ್ಧಾರಕ ಸಮಯವಾಗಿತ್ತು. ತನ್ನ ಪರಿವಾರದ ಕುರಿತಾಗಿ ಗಂಭೀರವಾಗಿ ಆಲೋಚಿಸಬೇಕಾದ ಸಮಯವಾಗಿತ್ತು. ಮೂರು ಎಳೆಯ ಮಕ್ಕಳ ಜವಾಬ್ದಾರಿ ಯೊಂದಿಗೆ ತಮ್ಮ ವೃತ್ತಿ ಜೀವನದ ಭವಿಷ್ಯದ ಬಗ್ಗೆಯೂ ಅವರು ಎಣಿಕೆ ಮಾಡಬೇಕಿತ್ತು. ತಾಯಿ ಮತ್ತು ದೊಡ್ಡಮ್ಮ ಕೈಲಾದ ಮಟ್ಟಿಗೆ ಮಕ್ಕಳನ್ನು ನೋಡಿಕೊಳ್ಳುತ್ತಿದ್ದರು. ಅಚ್ಚಮ್ಮಣ್ಣಿಗೆ ವಯಸ್ಸಾಗಿತ್ತು. ಅಲ್ಲದೇ ಆರೋಗ್ಯ ಹತೋಟಿಯಲ್ಲಿರಲಿಲ್ಲ. ಈ ಸ್ಥಿತಿಯಲ್ಲಿ ಮಕ್ಕಳ ಯೋಗಕ್ಷೇಮ ನೋಡಿಕೊಳ್ಳಲು ಯಾರಾದರೊಬ್ಬರು ಬೇಕೆಂದು ಮಗನನ್ನು ಮರುವಿವಾಹ ಆಗುವಂತೆ ಒತ್ತಾಯಿಸಲಾರಂಭಿಸಿದರು. ಅಲ್ಲದೆ ಸಂಪ್ರದಾಯ ಬದ್ಧ ಬ್ರಾಹ್ಮಣ ಸಮಾಜದಲ್ಲಿ ವಿದುರನಾದವನಿಗೆ ಯಾವುದೆ ಗೌರವ ಸ್ಥಾನವಿಲ್ಲ ಎಂಬುದನ್ನು ಅವರು ನಂಬಿದ್ದರು. ಶ್ರೀಕಂಠಯ್ಯನವರಿಗೆ ಯಾರ ಬೆಂಬಲವೂ ನಿರೀಕ್ಷಿಸದೆ ತಮ್ಮ ಮುಂದಿದ್ದ ಸಮಸ್ಯೆಗಳನ್ನು ಸ್ವತಃ ಬಗೆಹರಿಸಿಕೊಳ್ಳುವ ಸ್ಥಿತಿ ಬಂದಿತ್ತು.

ದೇವಮ್ಮನ ಅಂತ್ಯಕ್ರಿಯೆ ಮುಗಿದಿತ್ತು. ಶ್ರೀಕಂಠಯ್ಯನವರು ಹತ್ತು ದಿನಗಳ ರಜೆಯನ್ನು ಕೋರಿ ವಿಶ್ವವಿದ್ಯಾನಿಲಯಕ್ಕೆ ಅರ್ಜಿ ಸಲ್ಲಿಸಿದರು. ರಜೆ ಅಂಗೀಕೃತವಾಯಿತು. ಬಂಗಾಳ ಮಹಾಸಮುದ್ರ ತೀರದ ಧನುಷ್ಕೋಟಿ ಎಂಬ ಸಣ್ಣ ಊರಿಗೆ ಬಂದಿಳಿದರು. ಅಲ್ಲಿನ ವಸತಿಗೃಹವೊಂದರಲ್ಲಿ ಕೊಠಡಿಯನ್ನು ಪಡೆದುಕೊಂಡರು. ಪ್ರತಿದಿನ ಅಲ್ಲಿನ ಕಡಲತೀರಕ್ಕೆ

ನಡೆದು ಹೋಗುತ್ತಿದ್ದರು. ಸೂರ್ಯಸ್ತದವರೆವಿಗೆ ಅಲ್ಲೇ ಕಾಲಕಳೆಯುತ್ತಿದ್ದರು. ಮರಳ ತೀರದಲ್ಲಿ ದೂರದ ತನಕ ನಡೆದು ಹೋಗುತ್ತಿದ್ದರು. ಆಯಾಸವೆನಿಸಿದಾಗ ಯಾವುದಾದರೂ ಮರದ ನೆಳಲಲ್ಲಿ ಕುಳಿತು ಯೋಚನೆಗಳಲ್ಲಿ ಮುಳುಗಿ ಬಿಡುತ್ತಿದ್ದರು. ದೇವಮ್ಮನು ಶ್ರೀಕಂಠಯ್ಯನವರ ಮನಸ್ಸಿಗೆ ಬಹಳ ಹತ್ತಿರದವಳಾಗಿದ್ದಳು. ತಮಗೆ ಮಡದಿಯಾಗಿ, ಮಕ್ಕಳಿಗೆ ತಾಯಿಯಾಗಿದ್ದ ಆಕೆಯ ಸ್ಥಾನವನ್ನು ಬೇರಾವ ಹೆಣ್ಣೂ ಭರಿಸಲು ಸಾಧ್ಯವಿರಲಿಲ್ಲ. ತಾಯಿ ಹಳೆಯ ಸಂಪ್ರದಾಯವಳು. ಅವರ ಮಾತಿಗೆ ಮಣಿದು ಮರುವಿವಾಹವಾಗುವುದಂತು ಸಾಧ್ಯವಿರಲಿಲ್ಲ. ಅಡುಗೆ ಮಾಡಲು ಒಬ್ಬ ಹೆಂಗಸನ್ನು ಗೊತ್ತು ಪಡಿಸಿದರೆ ತಮ್ಮ ತಾಯಿಯವರಿಗೂ ಮನೆಗೆಲಸದಲ್ಲಿ ಸಹಾಯವಾಗುತ್ತದೆ. ಇದೇ ವಿಷಯವಾಗಿ ತಮ್ಮ ತಂಗಿ ಕಾವೇರಿಯ ಅಭಿಪ್ರಾಯವನ್ನು ಕೇಳಿ ತಿಳಿಯುವುದೆಂದು ನಿಶ್ಚಯಿಸಿದರು.

ಇದೆಲ್ಲದಕ್ಕಿಂತ ಮಿಗಿಲಾಗಿ ಒಂದು ತೃಪ್ತ ವೃತ್ತಿ ಜೀವನದ ಹಾದಿಯನ್ನು ನಿಶ್ಚಯಿಸಿ ಕೊಳ್ಳಬೇಕಾದ ಕೆಲಸ ಶ್ರೀಕಂಠಯ್ಯನವರ ಮುಂದಿತ್ತು. ಶ್ರೀಕಂಠಯ್ಯನವರು ಇಂಗ್ಲಿಷ್ ಸಾಹಿತ್ಯವನ್ನು ಚೆನ್ನಾಗಿ ಅಧ್ಯಯನ ಮಾಡಿದ್ದರು. ಆಂಗ್ಲರ ರೀತಿ ನೀತಿಗಳು, ಯೋಚನೆಗಳು ಹೇಗೆ ವಿನ್ಯಾಸಗೊಂಡಿವೆ ಎಂದು ಅರ್ಥೈಸಲೆತ್ನಿಸಿದ್ದರು. ಐರೋಪ್ಯ ಖಂಡದ ಲ್ಯಾಟಿನ್, ಗ್ರೀಕ್, ಫ್ರೆಂಚ್, ಜರ್ಮನ್ ಹಾಗು ಇಟಾಲಿಯನ್ ಭಾಷೆಗಳ ಉನ್ನತ ಸಾಹಿತ್ಯ ಕೃತಿಗಳ ಇಂಗ್ಲಿಷ್ ರೂಪಕಗಳನ್ನು ಓದಿ ಅರಿತುಕೊಂಡಿದ್ದರು. ತಾಯ್ನುಡಿ ಕನ್ನಡವನ್ನು ಕಲಿತಿದ್ದು ಸಾವಿರ ವರ್ಷಗಳ ಹಿಂದಿನ ಕನ್ನಡ ಸಾಹಿತ್ಯ ಕೃತಿಗಳನ್ನು ಓದಿದ್ದರು. ಆರ್ಯಭಾಷೆಯಾದ ಸಂಸ್ಕೃತದಲ್ಲಿಯೂ ಜ್ಞಾನ ಪಡೆದಿದ್ದು ಉಪನಿಷತ್ತು, ಬ್ರಾಹ್ಮಣಗಳು, ವೇದಗಳು ಹಾಗು ವ್ಯಾಕರಣಗಳನ್ನು, ನಾಟಕಕಾರ ಕಾಳಿದಾಸನ ಕೃತಿಗಳನ್ನು ಓದಿದ್ದರು. ಕನ್ನಡವು ಸಂಸ್ಕತ ಮೂಲ ಭಾಷೆಯಲ್ಲ ಅದು ದ್ರಾವಿಡ ಭಾಷೆಗಳ ಗುಂಪಿಗೆ ಸೇರಿದ್ದು, ಈ ಸಮೂಹದಲ್ಲಿ ಅತಿ ಪ್ರಾಚೀನ ವೆಂದರೆ ತಮಿಳು. ಅಂತಲೆ ಶ್ರೀಕಂಠಯ್ಯನವರು ತಮಿಳು ಭಾಷೆಯನ್ನು ಕುರಿತು ಅಧ್ಯಯನ ನಡೆಸಿದ್ದರು. ಕುರಲ್ ಮತ್ತು ಸಿಲಪ್ಪಡಿಕಾರನ್ ಎಂಬ ತಮಿಳು ಮಹಾಗ್ರಂಥ ಗಳನ್ನು ಕನ್ನಡಕ್ಕೆ ಅನುವಾದಿಸಿದರು. ತಮಿಳು ಮತ್ತು ಹಳೆಗನ್ನಡಗಳ ಹೊಂದಾಣಿಕೆಯನ್ನು ಗಮನಿಸಿದರು. ಒಟ್ಟಿನಲ್ಲಿ ಹೇಳುವುದಾದರೆ ಶ್ರೀಕಂಠಯ್ಯನವರು ಬಹು ಭಾಷಾ ವಿದ್ವಾಂಸ ರಾದರು. ತಮ್ಮ ಸಮಯದ ಬಹುಭಾಗವನ್ನು ಕನ್ನಡದ ಏಳ್ಗೆಗಾಗಿ ಮುಡಿಪಾಗಿಡುವುದೆಂದು ನಿರ್ಧರಿಸಿದರು. ಅನ್ಯ ಭಾಷೆಗಳಿಗಿಂತ ಕನ್ನಡವು ಕೀಳು ಎಂಬುದಾಗಿ ಜನರಿಗೆ ಅಂಟಿದ್ದ ಕೀಳರಿಮೆಯನ್ನು ತೊಲಗಿಸಿ ಅವರಲ್ಲಿ ಭಾಷಾಭಿಮಾನ ನೆಡಬೇಕೆಂಬುದನ್ನು ತಮ್ಮ ಧ್ಯೇಯವನ್ನಾಗಿಸಿಕೊಂಡರು. ಆದರೆ ಈ ಕೆಲಸದಲ್ಲಿ ಹೆಚ್ಚು ತೊಡಕುಗಳಿದ್ದು ಅವುಗಳಿಂದ ಹೊರಬರುವುದು ಕಷ್ಟದ ಕೆಲಸವೆಂಬ ಅರಿವು ಅವರಿಗಿತ್ತು. ಅಂತೆ ಬಹಳವಾಗಿ ಮೆಚ್ಚಿದ್ದ ಇಂಗ್ಲಿಷ್ ಭಾಷೆಯೆಡೆಗೂ ಅವರು ನಿರ್ಲಕ್ಷ್ಯ ತೋರುವಂತಿರಲಿಲ್ಲ.

ಶ್ರೀಕಂಠಯ್ಯನವರ ವೃತ್ತಿ ಜೀವನದಲ್ಲಿನ ಕೆಲವು ಸಂಗತಿಗಳನ್ನು ಸ್ಮರಿಸುವುದು ನನಗೆ ಹೆಮ್ಮೆಯ ವಿಷಯವಾಗಿದೆ. ಅವರು ಉತ್ತಮ ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದಕ್ಕಿಂತ ಹಳೆಗನ್ನಡ ಸಾಹಿತ್ಯದಲ್ಲಿ ಅಸಾಧಾರಣ ಪಾಂಡಿತ್ಯ ಪಡೆದಿದ್ದರೆನ್ನುವುದು ತಿಳಿದ ವಿಷಯ. ಅವರು

ಶಿಸ್ತುಗಾರರಾಗಿದ್ದವರು. ಉಪನ್ಯಾಸದ ನಡುವೆ ವಿದ್ಯಾರ್ಥಿಗಳು ಸಮಯೋಚಿತವಲ್ಲದ ಸಂಶಯಗಳನ್ನು ಹೊತ್ತು ತಮಗೆ ಅಡಚಣೆ ಉಂಟು ಮಾಡುವುದು ಅವರಿಗೆ ಹಿಡಿಸುತ್ತಿರಲಿಲ್ಲ. ವಿಲಿಯಮ್ ಶೇಕ್ಸ್‌ಪಿಯರ್‌ನ ನಾಟಕಗಳನ್ನು ತರಗತಿಯಲ್ಲಿ ಹೇಳಿಕೊಡುವ ಸಂದರ್ಭದಲ್ಲಿ ನಾಟಕದಲ್ಲಿ ಬರುವ ಪಾತ್ರಗಳನ್ನು ನಟಿಸಿ ತೋರಿಸುತ್ತಿದ್ದರು. ಈ ವಿಷಯದ ಬಗ್ಗೆ ಅರಿವಿದ್ದ ಅವರ ಬ್ರಿಟಿಷ್ ಸಹೋದ್ಯೋಗಿ ಪ್ರೊ. ಮ್ಯಾಕಿಯಾಶ್‌ರವರು ಒಂದು ದಿನ ಶ್ರೀಕಂಠಯ್ಯನವರನ್ನು ಕುರಿತು, 'ಮಿಸ್ಟರ್ ಶ್ರೀಕಂಠಯ್ಯ, ನೀವು ಆಕ್ಸ್‌ಫರ್ಡ್ ಅಥವ ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯಗಳಿಗೆ ಹೋದರೆ ಅಲ್ಲಿನವರು ನಿಮ್ಮನ್ನು ಭಾರತಕ್ಕೆ ಹಿಂದಿರುಗಲು ಬಿಡುವುದಿಲ್ಲ. ಯೋಚನೆ ಮಾಡಿ ನೀವು ಅಲ್ಲಿ ಹೋಗುವುದಕ್ಕೆ ಬೇಕಾದ ಎಲ್ಲ ವ್ಯವಸ್ಥೆಗಳನ್ನು ನಾನು ಮಾಡುತ್ತೇನೆ' ಎಂದಿದ್ದರು. ಆದರೆ ಶ್ರೀಕಂಠಯ್ಯನವರಿಗೆ ಅಲ್ಲಿಗೆ ಹೋಗುವುದು ಸಾಧ್ಯವಿರಲಿಲ್ಲ. ವೃದ್ಧರಾದ ತಾಯಿ ಚಿಕ್ಕವಯಸ್ಸಿನ ತಮ್ಮ ಮೂರು ಮಕ್ಕಳ ಜವಾಬ್ದಾರಿಯನ್ನು ಅವರು ಮರೆಯುವಂತಿರಲಿಲ್ಲ. ಇದರೊಂದಿಗೆ ಅಡುಗೆ ಮನೆಯ ಭಾಷೆ ಎಂದಾಗಿದ್ದ ಕನ್ನಡವನ್ನು ಎಲ್ಲರೂ ಗೌರವಿಸುವಂತಹ ಭಾಷೆಯನ್ನಾಗಿ ವಿಕಾಸಗೊಳಿಸಬೇಕೆಂಬ ತಮ್ಮ ಮಹದಾಕಾಂಕ್ಷೆಯ ಕೆಲಸವು ಇನ್ನು ನೆರವೇರಿರಲಿಲ್ಲ.

ಆಂಗ್ಲ ಕವಿಗಳಾದ ಮಿಲ್ಟನ್, ಬೈರಾನ್, ವರ್ಡ್ಸ್‌ವರ್ತ್ ಹಾಗು ಇತರ ಕವಿಗಳ ಸುಂದರ ಕವನಗಳನ್ನು ತಮ್ಮ ಬಿಡುವಿನ ಸಮಯದಲ್ಲಿ ಕನ್ನಡಕ್ಕೆ ತರ್ಜುಮೆ ಗೊಳಿಸುವ ಪ್ರಯೋಗವನ್ನು ಶ್ರೀಯವರು ಕೈಗೆತ್ತಿಕೊಂಡರು ಈ ರೀತಿಯಲ್ಲಿ ರಚಿಸಿದ ಕವನಗಳನ್ನು 'ಇಂಗ್ಲಿಷ್ ಗೀತೆಗಳು' ಎಂಬ ಸಂಕಲನವನ್ನಾಗಿ ಪ್ರಕಟಿಸಲು ಸಾಧ್ಯವಾಯಿತು. ಈ ಕಿರುಹೊತ್ತಿಗೆ ಶ್ರೀಕಂಠಯ್ಯನವರ ಮೊಟ್ಟ ಮೊದಲನೆಯ ಪ್ರಕಟಣೆ. ತಮ್ಮ ಸ್ನೇಹಿತರೊಡನೆ ನಿರರ್ಗಳವಾಗಿ ಇಂಗ್ಲಿಷ್ ಮಾತನಾಡುತ್ತಿದ್ದ ಶ್ರೀಕಂಠಯ್ಯನವರು ಕನ್ನಡದಲ್ಲಿ ಇಂತಹ ಅದ್ಭುತ ಕೃತಿಯನ್ನು ರಚಿಸಿದ್ದನ್ನು ಕಂಡು ಕನ್ನಡ ಓದುಗರು ಮೂಗಿನ ಮೇಲೆ ಬೆರಳನ್ನಿಟ್ಟರು. ಇನ್ನು ಕೆಲಕಾಲದಲ್ಲೇ ಹಳೆಗನ್ನಡವನ್ನು ಅಳವಡಿಸಿ ಮಾಡಿದ ಲಿಖಿತ ಪ್ರಯೋಗಗಳಿಂದಾಗಿ ಮೂಡಿ ಬಂದದ್ದು ಎರಡು ಸ್ವರಚಿತ ದುಃಖಾಂತ ನಾಟಕಗಳು 'ಅಶ್ವತ್ಥಾಮನ್' ಹಾಗು 'ಪಾರಸಿಕರು' 'ಅಶ್ವತ್ಥಾಮನ್' ಪುರಾಣ ಕಾವ್ಯ ಮಹಾಭಾರತದಲ್ಲಿ ಬರುವ ಒಂದು ಕಥೆಯನ್ನು ಆಧರಿಸಿ ರಚಿಸಿದ ನಾಟಕ. ಭಾರತೀಯ ಸಾಹಿತ್ಯದ ಲಕ್ಷಣಗಳಿಗೆ ವಿರುದ್ಧವಾಗಿ ಶ್ರೀಕಂಠಯ್ಯನವರು ಈ ಪುರಾಣ ಕಥೆಯನ್ನು ದುರಂತ ನಾಟಕವನ್ನಾಗಿ ರೂಪಾಂತರಿಸಿದರು. ಅವರ ಮತ್ತೊಂದು ನಾಟಕ 'ಪಾರಸಿಕರು' ಗ್ರೀಕ್ ದುರಂತ ನಾಟಕವನ್ನು ಆಧರಿಸಿ ರಚಿಸಿದ ನಾಟಕ. ಹೀಗೆ ಕನ್ನಡ ಸಾಹಿತ್ಯಕ್ಕೆ ದುರಂತ ನಾಟಕದ ಲಕ್ಷಣಗಳನ್ನು ಪರಿಚಯಿಸಿದ ಶ್ರೀಕಂಠಯ್ಯನವರನ್ನು ಕನ್ನಡ ಓದುಗರು ಬಹು ಕಟುವಾಗಿಯೇ ಟೀಕಿಸಿದರು. ಆದರೆ ಶ್ರೀಕಂಠಯ್ಯನವರು ಮನಃಕ್ಷೋಭಿತ ರಾಗಲಿಲ್ಲ. ಈ ಸಂಗತಿಗಳು ನಡೆದದ್ದು ನಾನು ಮಗುವಾಗಿದ್ದಾಗ ಅಂದರೆ 20ರ ದಶಕದ ಸುಮಾರಿನಲ್ಲಿ.

ಶ್ರೀಕಂಠಯ್ಯನವರು ತನ್ನ ಅಣ್ಣನಾದರೂ ಅವರ ಕೆಲಸಗಳನ್ನು ವಿಮರ್ಶಿಸಲು ನನ್ನ ತಂದೆ ಹಿಂಜರಿಯುತ್ತಿರಲಿಲ್ಲ. ಮಹಾತ್ಮ ಗಾಂಧಿಯವರ ಅಹಿಂಸೆಯ ಉದಾತ್ತ ತತ್ವ ಹಾಗು ಬ್ರಿಟಿಷ್

ಸರ್ಕಾರದ ಕಾರ್ಯನೀತಿಯಂತಹ ವಿಷಯಗಳು ನಮ್ಮ ಚರ್ಚಾ ವಿಷಯಗಳಾಗಿರುತ್ತಿದ್ದವು. ನನ್ನ ಬಂಧುಗಳಾದ ಸೇತುರಾಯರು, ಅಜ್ಜಿ ಕಮಲಮ್ಮ, ತಾಯಿ ಲಲಿತ, ಚಿಕ್ಕಮ್ಮ ಪುಟ್ಟಿ ಇವರೆಲ್ಲರು ಕೂಡ ಇಂತಹ ಚರ್ಚೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಪರಿವಾರದಲ್ಲಿ ಸಲಿಗೆಯ ವಾತಾವರಣ ಮನೆ ಮಾಡಿತ್ತು.

ಶ್ರೀಕಂಠಯ್ಯನವರನ್ನು ನಾವೆಲ್ಲರೂ ಅಕ್ಕರೆಯಿಂದ 'ಅಣ್ಣಯ್ಯ' ಎಂದು ಕರೆಯುತ್ತಿದ್ದೆವು. ಆದರೆ ನಮ್ಮಜ್ಜಿ ಕಮಲಮ್ಮ ಪುಟ್ಟಿ ಹಾಗು ಸೇತುರಾಯರು ಅವರನ್ನು 'ಶ್ರೀಕಂಠಯ್ಯ'ನೆಂದೇ ಸಂಬೋಧಿಸುತ್ತಿದ್ದರು. ಅಣ್ಣಯ್ಯ ಸ್ವಭಾವತಃ ಮಿತ ಸಂಭಾಷಣಾಸಕ್ತರು. ಅಣ್ಣ ತಮ್ಮಂದಿರ ಮಕ್ಕಳೊಂದಿಗೆ ಮಾತಿಗಿಳಿಯುತ್ತಿದ್ದುದು ಅಪರೂಪ. ಅವರು ಹಾಗೆ ಮಾತನಾಡಿಸಿದಾಗಲೆಲ್ಲ ಒಂದೆರಡು ಮಾತುಗಳನ್ನಾಡಿ ಸುಮ್ಮನಾಗಿ ಬಿಡುತ್ತಿದ್ದರು. ವ್ಯಾಕುಲರಾಗದೆ ನಮಗೆ ಇಷ್ಟವಾಗುವ ಯಾವುದೇ ವಿಷಯವನ್ನು ಚೆನ್ನಾಗಿ ಕಲಿಯಬೇಕೆಂದು ಮೂಢರಾಗಬಾರದೆಂದು ನಮಗೆಲ್ಲ ಬುದ್ಧಿವಾದ ಹೇಳುತ್ತಿದ್ದರು. ಬಿಡುವಿನ ಸಮಯದಲ್ಲಿ ಮನೆಯ ಮಕ್ಕಳೊಂದಿಗೆ ಸ್ವಲ್ಪ ಹೆಚ್ಚು ಮಾತನಾಡುತ್ತಿದ್ದರೂ ಅವಶ್ಯಕತೆಗೆ ಮೀರಿ ನುಡಿಯುತ್ತಿರಲಿಲ್ಲ. ಆದರೆ ಮನೆಯವರೊಂದಿಗೆಲ್ಲ ಪ್ರೀತಿ ಅಕ್ಕರೆಗಳಿಂದ ವರ್ತಿಸುತ್ತಿದ್ದರು.

ಶ್ರೀಕಂಠಯ್ಯನವರ ಅಭಿಪ್ರಾಯಗಳು ಎಂದೂ ಹಳೆಯ ಲಕ್ಷಣದ್ದಾಗಲಿ, ಸ್ವತಂತ್ರ ಚಿಂತನೆ ಇಲ್ಲದ್ದಾಗಲಿ ಆಗಿರಲೇ ಇಲ್ಲ. ಅವರು ಮರು ವಿವಾಹವಾಗಬೇಕೆಂಬ ತಾಯಿಯ ಇಚ್ಛೆಯನ್ನು ನಿರಾಕರಿಸಿದರು. ಈ ನಿರ್ಧಾರ ತಮ್ಮ ತಾಯಿಯವರಿಗೆ ಮಾತ್ರವಲ್ಲದೆ ಸ್ನೇಹಿತರು ಹಾಗು ಹಿತಾಸಕ್ತರಿಗೂ ಅಸಮಾಧಾನವನ್ನುಂಟು ಮಾಡಿತ್ತು. ಇವರೆಲ್ಲರ ಈ ಇಚ್ಛೆಯನ್ನು ಶ್ರೀಯವರು ನಿರಾಕರಿಸಿದ್ದರೂ ತಮ್ಮ ಇಬ್ಬರು ಹೆಣ್ಣು ಮಕ್ಕಳ ಜೀವನಗಳನ್ನು ರೂಪಿಸುವ ಉದ್ದೇಶದಲ್ಲಿ ತಮ್ಮ ತಾಯಿಯ ಅಪೇಕ್ಷೆಗಳಿಗೇ ತಲೆಬಾಗಬೇಕಾಯಿತು. ತಮ್ಮ ಇಬ್ಬರು ಪುತ್ರಿಯರನ್ನು ಮೈಸೂರಿನ ಬಾಲಕಿಯರ ಶಾಲೆಯಲ್ಲಿ ಓದಿಸಿದರು. ಮಕ್ಕಳಿಬ್ಬರ ಪ್ರಾಥಮಿಕ ಶಿಕ್ಷಣ ಮುಗಿಯಿತು. ಪ್ರೌಢಾವಸ್ಥೆಗೆ ತಲುಪುವ ಮುನ್ನವೆ ಹನ್ನೆರಡು ವರ್ಷಗಳು ತುಂಬುತ್ತಿದ್ದಂತೆ ಇಬ್ಬರಿಗೂ ಮದುವೆ ಮಾಡಿಬಿಟ್ಟರು. ತಂಗಿ ಕಾವೇರಿಯ ಸಹಾಯದಿಂದ ತಮ್ಮ ಮಕ್ಕಳಿಗೆ ಸರಿಹೊಂದುವ ಸ್ವಜಾತಿಯ ವರವನ್ನು ಹುಡುಕುವುದು ಸ್ವಲ್ಪ ಸುಲಭವಾಯಿತು.

ಹಾಸನದ ಸಂತೆಬಾಚಳ್ಳಿ ಮನೆತನದ ಹದಿನೆಂಟು ವಯ್ಯಸ್ಸಿನ ಗುಂಡಪ್ಪನಿಗೆ ತನ್ನ ಹಿರಿಯ ಮಗಳು ಶಾರದೆಯನ್ನು ಕೊಟ್ಟು ಶ್ರೀಕಂಠಯ್ಯನವರು ಮದುವೆ ಮಾಡಿದರು. ಗುಂಡಪ್ಪನವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ತಮ್ಮ ಇಂಟರ್ ಮೀಡಿಯೇಟ್ ಪರೀಕ್ಷೆಗೆ ಅಣಿ ಮಾಡಿಕೊಳ್ಳುತ್ತಿದ್ದರು. ಅವರು ಸ್ನೇಹ ಸ್ವಭಾವದವರಾಗಿದ್ದು ನೋಡಲು ಲಕ್ಷಣವಾಗಿದ್ದರು. 1923-24ರ ನಡುವಿನಲ್ಲಿ ಅಣ್ಣಯ್ಯನ ಮನೆಯಲ್ಲೇ ಈ ಮದುವೆ ನೆರವೇರಿತು. ನನ್ನ ತಂದೆ ತಾಯಿಗಳೇ ದೊಡ್ಡಸ್ತಿಕೆ ವಹಿಸಿ ಮದುವೆಯನ್ನು ನಡೆಸಿಕೊಟ್ಟರು. ಮುಂದಿನ ಒಂದೆರಡು ವರ್ಷಗಳಲ್ಲಿ ಕಿರಿಯ ಮಗಳು ತಂಗಳನ್ನು ಬೆಂಗಳೂರಿನ ನಾಗರಾಜರಾವ್ ಎಂಬುವರಿಗೆ ಕೊಟ್ಟು ಲಗ್ನ ಮಾಡಿದರು. ನಾಗರಾಜರಾಯರು ಆಗಷ್ಟೆ ತಮ್ಮ ಮಧ್ಯಂತರ ಪರೀಕ್ಷೆ ಮುಗಿಸಿ

ವಾಸ್ತು ಶಿಲ್ಪ ವಿಜ್ಞಾನದಲ್ಲಿ ತರಬೇತಿಗೆಂದು ಬೆಂಗಳೂರಿನ ಇಂಜಿನಿಯರಿಂಗ್ ಕಾಲೇಜನ್ನು ಸೇರಲು ಇಚ್ಛಿಸಿದರು. ಈ ಮದುವೆ ಸಮಾರಂಭದ ನನ್ನ ನೆನಪುಗಳು ಈಗ ಮಾಸಿಹೋಗಿವೆ. ಆದರೆ ತಂದೆ ತಾಯಿಯೊಡನೆ ತಂಗಳ ಧಾರೆಯಲ್ಲಿ ನಾನು ಪಾಲ್ಗೊಳ್ಳಲಾಗಲಿಲ್ಲವಲ್ಲ ಎಂದು ನಾನು ಗೋಗರೆದದ್ದು ಮಾತ್ರ ನೆನಪಿನಲ್ಲಿನ್ನೂ ಇದೆ,

ಶಾರದೆ ಪ್ರೌಢಾವಸ್ಥೆಗೆ ತಲುಪಿದ ಮೇಲೆ ಅಣ್ಣಯ್ಯ ತನ್ನ ಅಳಿಯ ಗುಂಡಪ್ಪನವರನ್ನು ತಾವಿದ್ದ ಹಾಸ್ಟಲಿನಿಂದ ಮನೆಗೆ ವರ್ಗವಾಗಬೇಕೆಂದು ವಿನಂತಿಸಿಕೊಂಡರು. ಇದಕ್ಕೆ ಗುಂಡಪ್ಪನವರೂ ತಕ್ಷಣ ಒಪ್ಪಿಕೊಂಡರು ಮನೆಗೆ ಬಂದ ಮೂರು ವರ್ಷಗಳಲ್ಲಿ ಶಾರದೆಯು ವಿಶಾಲಕ್ಷಿ ಮತ್ತು ಶ್ರೀಕಂಠನೆಂಬ ಇಬ್ಬರು ಮುದ್ದಾದ ಮಕ್ಕಳಿಗೆ ಜನ್ಮವಿತ್ತಳು. ಅಷ್ಟುಹೊತ್ತಿಗೆ ಗುಂಡಪ್ಪನವರು ಇಂಗ್ಲಿಷ್ ಸಾಹಿತ್ಯದಲ್ಲಿ ತಮ್ಮ ಸ್ನಾತಕೋತ್ತರ ಪದವಿಯನ್ನು ಹಾಸೀಲು ಮಾಡಿಕೊಂಡಿದ್ದರು. ಮೈಸೂರಿನ ಮಧ್ಯಂತರ ಕಾಲೇಜಿನ ಇಂಗ್ಲಿಷ್ ವಿಭಾಗದಲ್ಲಿ ಪ್ರಾಧ್ಯಾಪಕರಾಗಿ ನೇಮಕಗೊಂಡರು. ತಮ್ಮ ಸಹೋದ್ಯೋಗಿಗಳು, ವಿದ್ಯಾರ್ಥಿಗಳು, ಇವರೆಲ್ಲರಿಗೂ ಗುಂಡಪ್ಪನವರು ಪ್ರೀತಿಪಾತ್ರರಾಗಿಯೂ ಆದರಣೀಯರಾಗಿಯೂ ಇದ್ದರು. ಶ್ರೀಕಂಠಯ್ಯನವರ ಮಗ ತಮ್ಮಯ್ಯ ಜಾಣನು, ಒಳ್ಳೆಯ ಸ್ವಭಾವದವನು ಆಗಿದ್ದನು. ಆಗಿನ ಕಾಲದಲ್ಲಿ ಮೈಸೂರಿನಲ್ಲಾಗಲಿ, ಬೆಂಗಳೂರಿನಲ್ಲಾಗಲಿ ಅಂಗವಿಕಲರಿಗೆಂದು ಯಾವುದೆ ವಿಶೇಷ ಶಿಕ್ಷಣದ ವ್ಯವಸ್ಥೆ ಇರಲಿಲ್ಲ. ತಮ್ಮಯ್ಯನು ಪರಿವಾರದವರಿಗೆಲ್ಲ ಪ್ರೀತಿಪಾತ್ರನಾಗಿದ್ದ. ತನ್ನ ಎಲ್ಲ ದೇಹ ಸೌಕರ್ಯಗಳನ್ನು ಪರಿವಾರದವರು ನೋಡಿಕೊಳ್ಳುತ್ತಿದ್ದರು. ವಿದ್ಯೆ ಹಾಗು ಜ್ಞಾನದ ಬೆಲೆಯ ಅರಿವಿದ್ದ ಶ್ರೀಕಂಠಯ್ಯನವರು ತನ್ನ ಮಗನನ್ನು ಮೂಢನಾಗಿ ಉಳಿಯಲು ಬಿಡುವರೆ? ಮಗನಿಗೆಂದು ಕನ್ನಡ, ಇಂಗ್ಲಿಷ್ ಹಾಗು ಸಂಸ್ಕೃತದ ಹೊತ್ತಿಗೆಗಳನ್ನು ಓದಿಹೇಳತಕ್ಕ ಮೇಷ್ಟರೊಬ್ಬರನ್ನು ಗೊತ್ತುಮಾಡಿದರು. ಅಣ್ಣಯ್ಯನೂ ಕೂಡ ತಮ್ಮ ಬಿಡುವಿನ ಸಮಯದಲ್ಲಿ ಕನ್ನಡ ಮತ್ತು ಇಂಗ್ಲಿಷ್ ಸಾಹಿತ್ಯ ಓದಿ ಭಾಷೆಯ ಸೊಗಸು, ಅದರ ಸುಲಭ ಕ್ಲಿಷ್ಟಗಳನ್ನು ವಿವರಿಸುತ್ತಿದ್ದರು. ಹೀಗೆ ತಮ್ಮಯ್ಯನ ವಿದ್ಯಾಭ್ಯಾಸವೂ ಸಾಗಿತ್ತು. ಓದಲು, ಬರೆಯಲು ಆಗದಿದ್ದರೂ ಕನ್ನಡ ಮತ್ತು ಇಂಗ್ಲಿಷುಗಳಲ್ಲಿ ತನ್ನ ಸಹಿ ಮಾಡುವುದನ್ನು ಕಲಿತಿದ್ದನು. ಯಾರ ನೆರವಿಲ್ಲದೆಯೇ ಮನೆಯಲ್ಲಿ ಸುಲಭವಾಗಿ ಓಡಾಡುತ್ತಿದ್ದನು. ವ್ಯಕ್ತಿಯ ಚಲನವಲನದಿಂದಲೆ ಯಾರೆಂದು ಗುರುತಿಸುತ್ತಿದ್ದನು. ನನಗೆ ನೆನಪಾದಂತೆ ಒಮ್ಮೆ ತಂದೆ ತಾಯಿಗಳೊಂದಿಗೆ ನಾನು ಅಣ್ಣಯ್ಯನ ಮನೆಗೆ ಹೋಗಿದ್ದೆ. ಬಾಗಿಲ ಬಳಿ ಬಂದಾಕ್ಷಣ, ''ರಾಜಿ ನೀನು ಬಂದದ್ದು ಬಹಳ ಸಂತೋಷವಾಯಿತು. ಬಾ ಕುಳಿತುಕೊ, ನನ್ನ ಜೊತೆ ಮಾತನಾಡು'' ಎಂದು ಸ್ವಾಗತಿಸಿದ್ದ.

1914ರ ನಡುವಿನಲ್ಲಿ ಮೈಸೂರು ಮಹಾರಾಜ ಕಾಲೇಜಿನ ಇಂಗ್ಲಿಷ್ ವಿಭಾಗದಲ್ಲಿ ನನ್ನ ದೊಡ್ಡಪ್ಪನವರು ಸಹ ಪ್ರಾಧ್ಯಾಪಕರಾದರು. 1919ರಲ್ಲಿ ದ್ವಿತೀಯ ಸ್ತರದ ಪ್ರಾಧ್ಯಾಪಕರಾಗಿ ಬಡ್ತಿ ಸ್ವೀಕರಿಸಿದರು.

'ರ್ಹೆಟೋರಿಕ' ವಿಷಯವಾಗಿ ಸ್ನಾತಕ ಹಾಗು ಸ್ನಾತಕೋತ್ತರ ಕ್ರಮಗಳ ವಿದ್ಯಾರ್ಥಿಗಳಿಗೆ ನೆರವಾಗಲೆಂದು 'ನೋಟ್ಸ್ ಆನ್ ರ್ಹೆಟೋರಿಕ್' ಎಂಬ ಸಣ್ಣ ಪಠ್ಯಪುಸ್ತಕವೊಂದನ್ನು ಪ್ರಕಟಿಸಿದರು. ಈ ಪುಸ್ತಕದ ಪ್ರಯೋಜನವನ್ನು ಭಾರತದ ಇತರ ವಿಶ್ವವಿದ್ಯಾನಿಲಯಗಳ

ಹಾಗು ಕಾಲೇಜುಗಳ ವಿದ್ಯಾರ್ಥಿಗಳೂ ಪಡೆದಕೊಂಡರು. ಕನ್ನಡ ಹಾಗು ಕನ್ನಡ ಸಾಹಿತ್ಯದ ಬಗೆಗೆ ತಮಗಿದ್ದ ಜ್ಞಾನದ ಹರವನ್ನು ಇದೇ ವಿಷಯವನ್ನು ಕುರಿತು ಧಾರಾವಾಡ ವಿದ್ಯಾವರ್ಧಕ ಸಂಘದಲ್ಲಿ ಕೊಟ್ಟ ಕೆಲವು ಉಪನ್ಯಾಸಗಳಿಂದ ಅಲ್ಲಿನ ಶ್ರೋತೃಗಳಿಗೆ ತಿಳಿದು ಬಂತು. ಇಂಗ್ಲಿಷ್ ಭಾಷೆಯನ್ನು ಬೋಧಿಸುವುದು ಬ್ರಿಟಿಷಿನವರಿಂದ ಮಾತ್ರ ಸಾಧ್ಯ ಎಂಬುದು ಆಗಿನ ಆಡಳಿತ ದವರ ನಂಬುಗೆ ಹಾಗಾಗಿ ಬಹಳ ವರ್ಷಗಳವರೆಗೂ ಆಡಳಿತದವರು ಶ್ರೀಕಂಠಯ್ಯನವರಿಗೆ ಹಿರಿಯ ಪ್ರಾಧ್ಯಾಪಕ ಸ್ಥಾನಕ್ಕೆ ಬಡ್ತಿ ನೀಡಲು ಇಚ್ಛಿಸಿರಲಿಲ್ಲ. ಎಂತೇ ಆದರೂ 1962ರಲ್ಲಿ ಅವರನ್ನು ಮೈಸೂರು ವಿಶ್ವವಿದ್ಯಾನಿಲಯದ ಕುಲಸಚಿವರನ್ನಾಗಿ ನೇಮಿಸಿದರು. ಇದೇ ಸ್ಥಾನದಲ್ಲಿ ಶ್ರೀಕಂಠಯ್ಯನವರು ಮುಂದಿನ ಕೆಲವು ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಸ್ವತಃ ಪಂಡಿತರಾಗಿದ್ದ ಬ್ರಜೇಂದ್ರನಾಥ ಶೀಲ್ ಆ ಸಮಯದಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿ ಸೇವೆಯಲ್ಲಿದ್ದರು. ಸಹೋದ್ಯೋಗಿಗಳಿಬ್ಬರೂ ಕೆಲವು ದಿನಗಳಲ್ಲಿ ಆಪ್ತರಾದರು. ಶ್ರೀಕಂಠಯ್ಯನವರ ಪಾಂಡಿತ್ಯವನ್ನು ಅರಿತು ಶೀಲ್‌ರು ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ಕನ್ನಡ ಭಾಷೆಯ ಬೆಳವಣಿಗೆಗೆ ದುಡಿಯಬೇಕೆಂಬ ಶ್ರೀಕಂಠಯ್ಯನವರ ಆಕಾಂಕ್ಷೆಯನ್ನು ತಿಳಿದು ಬ್ರಜೇಂದ್ರನಾಥರು ಒಂದು ಪ್ರತ್ಯೇಕ ಕನ್ನಡ ವಿಭಾಗವನ್ನು ರಚಿಸಿ ಕನ್ನಡ ಭಾಷೆಯಲ್ಲಿ ಸ್ನಾತಕೋತ್ತರ ಪದವಿ ಕ್ರಮವನ್ನು ಪರಿಚಯಿಸುವ ಸಾಧ್ಯತೆಗಳ ಬಗ್ಗೆ ಶ್ರೀಕಂಠಯ್ಯನವರೊಂದಿಗೆ ಚರ್ಚಿಸುತ್ತಿದ್ದರು. ಹೀಗೆ ಮಾಡುವುದರಿಂದ ಕನ್ನಡದ ಏಳ್ಗೆಗೆ ರೆಕ್ಕೆ ಕೊಟ್ಟಂತಾಗುತ್ತದೆಂಬ ತಮ್ಮ ಅಭಿಪ್ರಾಯವನ್ನು ಶ್ರೀಕಂಠಯ್ಯನವರ ಮುಂದಿಟ್ಟರು. ಈ ಯೋಜನೆ ಶ್ರೀಕಂಠಯ್ಯನವರ ಉತ್ಸಾಹ ಹೆಚ್ಚಿಸಿತು. ತಮ್ಮ ಬಿಡುವಿನ ಸಮಯವನ್ನೆಲ್ಲ ಈ ಯೋಜನೆಯ ತಪಶೀಲುಗಳನ್ನು ತಯಾರಿಸುವುದರಲ್ಲೆ ಕಳೆದರು. ಒಂದು ವರ್ಷದಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿದ್ದ ಮಹಾರಾಜರು, ಮಹಾರಾಜ ಕಾಲೇಜಿನಲ್ಲಿ ಕನ್ನಡ ಬಿ.ಎ. ಹಾಗು ಕನ್ನಡ ಎಂ.ಎ ಕ್ರಮಗಳನ್ನು ಜಾರಿಗೆ ತರಲು ತಮ್ಮ ಸಮ್ಮತಿ ಸೂಚಿಸಿದರು. ವಿಭಾಗದ ಮುಖ್ಯಸ್ಥರ ಹಾಗು ಹಿರಿಯ ಪ್ರಾಧ್ಯಾಪಕರ ಸ್ಥಾನಗಳಿಗೆ ಬ್ರಜೇಂದ್ರನಾಥರು ಹಾಗು ಶ್ರೀಕಂಠಯ್ಯನವರ ಹೆಸರುಗಳನ್ನೆ ಸೂಚಿಸಿದರು. ಆದರೆ ಶ್ರೀಕಂಠಯ್ಯನವರಿಗು ಇಂಗ್ಲಿಷ್ ವಿಭಾಗದ ಹಿರಿಯ ಪ್ರಾಧ್ಯಾಪಕರಾಗಿಯೂ, ಕನ್ನಡ ಗೌರವ ಪ್ರಾಧ್ಯಾಪಕರಾಗಿಯೂ ಸೇವೆಸಲ್ಲಿಸುವ ತಮ್ಮ ಇಚ್ಛೆಯನ್ನು ಆಡಳಿತದ ಮುಂದಿಟ್ಟರು. ಮಹಾರಾಜರು ಶ್ರೀಯವರ ಈ ಇಚ್ಛೆಗೆ ಸಮ್ಮತಿಸಿದರೂ, ಹಿರಿಯ ಪ್ರಾಧ್ಯಾಪಕ ಸ್ಥಾನವು ಖಾಲಿಯಿರಲಿಲ್ಲವಾದ್ದರಿಂದ ದ್ವಿತೀಯ ಸ್ಥರದ ಪ್ರಾಧ್ಯಾಪಕರಾಗಿಯೆ ಮುಂದುವರಿಯ ಬೇಕಾಯಿತು. ಸ್ನಾತಕೋತ್ತರ ಹಂತದ ಇಂಗ್ಲಿಷ್ ಹಾಗು ಕನ್ನಡ ಕ್ರಮಗಳೆರಡನ್ನೂ ಹೇಳಿಕೊಡುತ್ತಿದ್ದರಿಂದ ಮೊದಲಿಗಿಂತ ಎರಡು ಪಟ್ಟು ಕೆಲಸ ಈಗ ಶ್ರೀಕಂಠಯ್ಯನವರ ಮುಂದಿತ್ತು.

ಶ್ರೀಕಂಠಯ್ಯನವರ ಉಪನ್ಯಾಸಗಳು ವಿದ್ಯಾರ್ಥಿಗಳನ್ನು ಬೆರಗು ಗೊಳಿಸುತ್ತಿತ್ತು. ಹಲವು ವಿಷಯಗಳು ಆಯ್ಕೆಯ ಪಟ್ಟಿಯಲ್ಲಿದ್ದರೂ ಶ್ರೀಕಂಠಯ್ಯನವರ ಉಪನ್ಯಾಸ ಕೇಳಬಹುದೆಂದೆ ವಿದ್ಯಾರ್ಥಿಗಳು ಕನ್ನಡವನ್ನು ತಮ್ಮ ವಿಷಯವನ್ನಾಗಿ ಆರಿಸಿಕೊಳ್ಳುತ್ತಿದ್ದರು. ಕೆಲ ವರ್ಷಗಳಲ್ಲಿ

ಮಹಾರಾಜ ಕಾಲೇಜಿನ ಕನ್ನಡ ವಿಭಾಗ ಹೆಸರುವಾಸಿಯಾಯಿತು. ಶ್ರೀಕಂಠಯ್ಯನವರು ಕನ್ನಡಿಗರ ಮನೆಮಾತಾದರು. ಕನ್ನಡ ಭಾಷೆಯ ವಿಕಾಸದತ್ತಲಿನ ಶ್ರೀಕಂಠಯ್ಯನವರ ದೃಷ್ಟಿಯನ್ನು ವಿರೋಧಿಸುವವರೂ ಕೆಲವರಿದ್ದರು. ಎಂಬುದು ವಿಷಾದನೀಯ. ಶ್ರೀಕಂಠಯ್ಯನವರು ಕನ್ನಡ ಉದ್ಧಾರಕ್ಕೆಂದು ಸಲ್ಲಿಸುತ್ತಿದ್ದ ಸೇವೆಯನ್ನು ಶ್ರೀ ನಾಲ್ವಡಿಕೃಷ್ಣರಾಜ ಒಡೆಯರು ಬಹಳ ಪ್ರಶಂಸಿಸಿದರಲ್ಲದೆ ರಾಜ್ಯಕ್ಕೆ ಮಾಡಿದ ಅಮೋಘ ಸೇವೆಯನ್ನು ಗುರುತಿಸಿ 'ರಾಜ್ಯಸೇವ ಪ್ರಸಕ್ತ'ನೆಂಬುದಾಗಿ ಬಿರುದು ನೀಡಿದರು.

1930ರಲ್ಲಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಇಂಗ್ಲಿಷ್ ಹಿರಿಯ ಪ್ರಾಧ್ಯಾಪಕರ ಸ್ಥಾನ ಅನಿರತವಾಗಿತ್ತು. ಈ ಸ್ಥಾನವನ್ನು ಶ್ರೀಕಂಠಯ್ಯನವರು ಭರಿಸಬೇಕೆಂದು ಮಹಾರಾಜರು ಆಶಿಸಿದರು. ಶ್ರೀಕಂಠಯ್ಯನವರು ತಾವು ಕಷ್ಟಪಟ್ಟು ಕೆಲಸ ಮಾಡಿದ ಮೈಸೂರಿನ ಕಾಲೇಜನ್ನು ತೊರೆಯ ಬೇಕಾಗಿಬಂತು. ಉಪಾಂಕ ಶಿಕ್ಷಕ ವರ್ಗವನ್ನು ಶಿಕ್ಷಣ ಮಟ್ಟವನ್ನು ಇಳಿಸಗೊಡದಂತೆ ತಯಾರು ಮಾಡಿದ್ದರು. ಶ್ರೀಕಂಠಯ್ಯನವರು ಬೆಂಗಳೂರಿಗೆ ಹೊರಟಿದ್ದು ಅವರಿಗೆಲ್ಲ ಬೇಸರ ತಂದಿತ್ತು. ಕಾಲೇಜಿನ ಕನ್ನಡ ಹಾಗು ಇಂಗ್ಲಿಷ್ ವಿದ್ಯಾರ್ಥಿಗಳು ಸಹೋದ್ಯೋಗಿಗಳು ಮತ್ತು ಕನ್ನಡಕ್ಕಾಗಿನ ತಮ್ಮ ಕೆಲಸದಲ್ಲಿ ನೈತಿಕ ಬೆಂಬಲವನ್ನೊದಗಿಸಿದ ಮೈಸೂರಿನ ಜನತೆ ಶ್ರೀಕಂಠಯ್ಯನವರು ಭವಿಷ್ಯದ ತಮ್ಮ ಎಲ್ಲ ಕೆಲಸಗಳಲ್ಲಿ ಸಫಲತೆ ಪಡೆಯಲೆಂದು ಹರಸಿ ಭಾವಾಭಿವ್ಯಂಜಕ ಬೀಳ್ಕೊಡುಗೆಯನ್ನಿತ್ತರು.

1930ರ ಮಾತು ಬೆಂಗಳೂರಿಗೆ ಬಂದಿಳಿದ ಶ್ರೀಕಂಠಯ್ಯನವರು ಆಗಷ್ಟೆ ಸೆಂಟ್ರಲ್ ಕಾಲೇಜಿನ ಇಂಗ್ಲಿಷ್ ವಿಭಾಗದ ಮುಖ್ಯಸ್ಥರಾಗಿ ತಮ್ಮ ಸೇವೆಯಲ್ಲಿ ತೊಡಗಿದ್ದರು. ಬೆಂಗಳೂರಿನ ಇಂಟರ್ ಮೀಡಿಯೇಟ್ ಕಾಲೇಜಿನಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿ ಕೆಲಸದಲ್ಲಿದ್ದ ಅಳಿಯ ಗುಂಡಪ್ಪನವರು ಅಸ್ವಸ್ಥರಾದರು. ಅವರಿಗೆ ಟೈಫಾಯ್ಡ್ ಖಾಯಿಲೆಯೆಂದು ವೈದ್ಯರು ನಿಧಾನಿಸಿದರು. ಆಗಿನ ದಿನಗಳಲ್ಲಿ ಟೈಫಾಯ್ಡ್ ಜ್ವರ ನಿಯಂತ್ರಣಕ್ಕೆ ತಕ್ಕ ಔಷಧ ಮದ್ದು ಇರಲಿಲ್ಲ. ಈ ಜ್ವರದಿಂದ ಚೇತರಿಸಿಕೊಳ್ಳುತ್ತಿದ್ದ ರೋಗಿಗಳು ಅಪರೂಪ. ಶಾರದೆ ವೈದ್ಯರ ಸೂಚನೆಗನುಗುಣವಾಗಿ ಪತಿಯ ಆರೈಕೆ ಮಾಡಿದಳಾದರೂ ನಲವತ್ತು ದಿನಗಳ ನಿರಂತರ ಜ್ವರದಿಂದ ನರಳಿದ್ದ ಗುಂಡಪ್ಪನವರು ತಮ್ಮ ಅಂತ್ಯ ಕಂಡರು. ಶ್ರೀಕಂಠಯ್ಯನವರ ತಾಯಿ ಭಾಗೀರಥಮ್ಮನವರಿಗೂ ಜ್ವರ ಅಂಟಿಕೊಂಡು ಮುಂದಿನ ಹದಿನೈದು ದಿನಗಳೊಳಗಾಗಿಯೇ ಅವರೂ ದೈವಾಧೀನರಾಗಿ ಹೋದರು. ಇವೆರಡು ಘಟನೆಗಳು ನಡೆದಾಗ ನಾನು ಸುಮಾರು ಹನ್ನೊಂದು ವರ್ಷಗಳ ಹುಡುಗಿ. ತಾಯಿಗೆ ವಯಸ್ಸಾಗಿತ್ತು. ಅದು ಅಲ್ಲದೆ ಅನಾರೋಗ್ಯ ಕಾಡುತ್ತಿತ್ತು. ಭಾಗೀರಥಮ್ಮನವರ ಸಾವು ಪರಿವಾರದವರಿಗೆ ಅಷ್ಟು ನೋವನ್ನುಂಟು ಮಾಡಿರಲಿಲ್ಲ. ಆದರೆ ಗುಂಡಪ್ಪನವರ ಸಾವು ಅವರೆಲ್ಲರಿಗೂ ಆಘಾತವನ್ನೇ ಉಂಟುಮಾಡಿತ್ತು. ಇಪ್ಪತ್ತರ ಹರೆಯದ ಶಾರದೆ ಜೀವನದುದ್ದಕ್ಕು ವಿಧವೆಯ ಬಾಳು ಬಾಳಬೇಕಿತ್ತು. ಶಾರದೆಯ ಮಾವನವರು ಅವಳನ್ನು ಹಾಸನದಲ್ಲಿನ ತಮ್ಮ ಮನೆಗೆ ಕಳುಹಿಸುವಂತೆ ಶ್ರೀಕಂಠಯ್ಯನವರಲ್ಲಿ ಕೇಳಿಕೊಂಡರು. ಆದರೆ ಶ್ರೀಕಂಠಯ್ಯನವರು ಇದಕ್ಕೆ ಒಪ್ಪಲಿಲ್ಲ. ಶ್ರೀಕಂಠಯ್ಯನವರ ಈ ವರ್ತನೆ ಬೀಗರಿಗೆ ಬೇಸರ

ತಂದಿತ್ತು. ಮಗಳ ಭವಿಷ್ಯವು ಮುಖ್ಯವೆನಿಸಿದ ಶ್ರೀಕಂಠಯ್ಯನವರು ಇದರ ಬಗ್ಗೆ ಚಿಂತೆಗೀಡಾಗಲಿಲ್ಲ. ತಮಗೆ ಮಾತ್ರ ಶಾರದೆ ಹಾಗು ಮಕ್ಕಳನ್ನು ಚೆನ್ನಾಗಿ ನೋಡಿಕೊಳ್ಳಲು ಸಾಧ್ಯ ಎನ್ನುವುದು ಶ್ರೀಕಂಠಯ್ಯನವರಿಗೆ ತಿಳಿದಿತ್ತು.

ಗುಂಡಪ್ಪನವರು ತೀರಿಕೊಂಡಾಗ ಶ್ರೀಕಂಠಯ್ಯನವರಿಗೆ ವಯಸ್ಸು ನಲವತ್ತೈದು. ತಮ್ಮ ಕೆಲಸಗಳಲ್ಲದೆ ಮಗಳು, ಮೊಮ್ಮಕ್ಕಳ ಕ್ಷೇಮ, ಸುಖಗಳತ್ತಲೂ ಗಮನವನ್ನು ಹರಿಸಬೇಕಿತ್ತು. ಇವೆ ವಿಷಯಗಳನ್ನು ಕುರಿತು ಶ್ರೀಕಂಠಯ್ಯನವರು ಗಂಭಿರವಾಗಿ ಆಲೋಚಿಸತೊಡಗಿದರು. ತಮ್ಮ ಕಾಲ ಮುಗಿದ ಮೇಲೂ ಶಾರದೆ ಹಾಗು ಮಕ್ಕಳು ಪರರಿಗೆ ಭಾರವೆನಿಸದೆ ಸ್ವಾವಲಂಬಿಗಳಾಗಿ ಜೀವನವನ್ನು ನಡೆಸಲು ಸಾಧ್ಯವಾಗುವಂತೆ ವ್ಯವಸ್ಥೆ ರೂಪಿಸಬೇಕು ಎಂಬುದಾಗಿ ನಿರ್ಧರಿಸಿದರು.

ಶಾರದೆ ಅಷ್ಟಾಗಿ ಔಪಚಾರಿಕ ಶಿಕ್ಷಣ ಪಡೆದಿರಲಿಲ್ಲ. ತಂಗ ಹಾಗು ನಾಗರಾಜರಾಯರು ಬೆಂಗಳೂರಿನಲ್ಲೆ ವಾಸವಾಗಿದ್ದರು. ನಾಗರಾಜರಾಯರು ಇಂಜಿನಿಯರಿಂಗ್ ಮುಗಿಸಿ ಕೆಲಸ ಹುಡುಕುತ್ತಿದ್ದರು. ಬಹಳ ಹೊತ್ತು ಅವರು ಮನೆಯಲ್ಲಿರುತ್ತಿರಲಿಲ್ಲ. ಹಾಗಾಗಿ ತಂಗ ಹೆಚ್ಚು ಸಮಯ ತಂದೆಯ ಮನೆಯಲ್ಲೆ ಇರುತ್ತಿದ್ದಳು. ಶಾರದೆ ಮನೆಗೆಲಸದಲ್ಲಿ ನಿಪುಣೆ ಎನಿಸಿದ್ದಳು. ಈಗ ತಂಗಳ ಸಹಾಯದಿಂದ ಮನೆಯ ನಿರ್ವಹಣೆಯನ್ನು ಇಬ್ಬರು ಅಚ್ಚುಕಟ್ಟಾಗಿ ನಡೆಸಿಕೊಂಡು ಬಂದಿದ್ದರು. ನಿತ್ಯ ಮಧ್ಯಾಹ್ನದ ವೇಳೆ ಅಕ್ಕತಂಗಿಯರಿಗೆ ಬಿಡುವಿನ ಸಮಯ ವಾಗಿತ್ತು. ಈ ಬಿಡುವಿನ ವೇಳೆಯಲ್ಲಿ ತಮ್ಮಯ್ಯನಿಗೂ ಸೇರಿದಂತೆ ಮೂವರಿಗೂ ಇಂಗ್ಲಿಷ್ ಸಂಭಾಷಣೆಯಲ್ಲಿ ತರಬೇತು ನೀಡುವ ಸಲುವಾಗಿ ಅಣ್ಣಯ್ಯ ಓರ್ವ ಮನೆಪಾಠ ಹೇಳುವ ಮೇಷ್ಟರನ್ನು ಗೊತ್ತು ಮಾಡಿದರು. ಹೋಮ್‌ಸ್ಕೂಲ್ ಎಂಬ ಖಾಸಗಿ ಶಾಲೆಯನ್ನು ನಡೆಸುತ್ತಿದ್ದ ಮಿಸ್ ಮುರಿಯಲ್ ರಾಬಿನ್‌ಸನ್ ಎಂಬ ಅಮೆರಿಕದ ಮಹಿಳೆ ಶ್ರೀಕಂಠಯ್ಯನವರ ಮನೆಯ ಹತ್ತಿರ ವಾಸವಾಗಿದ್ದರು. ಶಾಲೆಯು ಒಳ್ಳೆಯದಾಗಿತ್ತು. ಇದೆ ವಿಷಯವಾಗಿ ಶ್ರೀಕಂಠಯ್ಯ ನವರು ಮಹಿಳಾ ಸೇವಾ ಸಮಾಜವೆಂಬ ಶಿಕ್ಷಣ ಸಂಸ್ಥೆಯನ್ನು ನಿರ್ವಹಿಸುತ್ತಿದ್ದ ನನ್ನ ಅಜ್ಜಿ ಕಮಲಮ್ಮನವರ ಅಭಿಪ್ರಾಯ ಯಾಚಿಸಿದರು. ಕಮಲಮ್ಮನವರ ಆಶ್ವಾಸನೆಯ ಮೇರೆಗೆ ಶ್ರೀಕಂಠ ಹಾಗು ವಿಶಾಲಾಕ್ಷಿ ಇಬ್ಬರನ್ನು ಇದೇ ಶಾಲೆಗೆ ದಾಖಲು ಮಾಡಿದರು. ಈ ಬದಲಾವಣೆ ತಮ್ಮ ಮಕ್ಕಳ ಮನೋಧರ್ಮವನ್ನು ಎಷ್ಟರ ಮಟ್ಟಿಗೆ ಬದಲಾಯಿಸಿತ್ತೆನ್ನುವುದು ವರ್ಷದೊಳಗಾಗಿಯೇ ಶ್ರೀಕಂಠಯ್ಯನವರಿಗೆ ಅರಿವಾಯಿತು. ಶಾರದೆ ತನ್ನ ಹಾಗು ತನ್ನ ಮಕ್ಕಳ ದುರ್ಭಾಗ್ಯವನ್ನು ಮರೆತು, ಎಲ್ಲರೊಂದಿಗೆ ಬಿಚ್ಚು ಮನಸ್ಸಿನಿಂದ ಸ್ನೇಹಭಾವದಿಂದ ಬೆರೆಯಲಾರಂಭಿಸಿದ್ದರು. ಬದುಕನ್ನು ಭರವಸೆ ತುಂಬಿದ ದೃಷ್ಟಿಯಿಂದ ಕಾಣಲಾರಂಭಿಸಿದ್ದರು. ಅಣ್ಣಯ್ಯನು ಶಾರದೆಗೆಂದು ಬ್ಯಾಂಕಿನಲ್ಲಿ ಖಾತೆ ತೆರೆದುಕೊಟ್ಟರು. ಖಾತೆಯ ನಿರ್ವಹಣೆಯನ್ನು ಶಾರದೆಗೇ ಒಪ್ಪಿಸಿದರು. ಇವೆಲ್ಲದರಿಂದ ಶಾರದೆಯ ಆತ್ಮವಿಶ್ವಾಸ ಹೆಚ್ಚಿತ್ತು. ಶಾರದೆ ಹಾಗು ತಂಗ ಆಗಿಂದಾಗ್ಗೆ ಹೋಮ್‌ಸ್ಕೂಲಿನತ್ತ ಹೋಗುತ್ತಿದ್ದರು. ಮಹಿಳಾ ಸೇವಾ ಸಮಾಜದಲ್ಲಿ ನನ್ನ ಶಿಕ್ಷಕಿಯಾಗಿದ್ದ ಮಿಸ್‌ಡೋನ್ ಮುರಿಯಲ್‌ರ ಜೊತೆಗೆ ವಾಸವಾಗಿದ್ದರು. ಈ ಸ್ನೇಹಪರ ಭೇಟಿಗಳಿಂದಾಗಿ ಶಾರದ ಹಾಗು ತಂಗ ಅಮೆರಿಕನ್ನರ ರೀತಿನೀತಿಗಳನ್ನರಿತರು. ಕೇಕ್ ಹಾಗು

ಇತರ ಶಾಖಾಹಾರಿ ಅಡುಗೆಗಳನ್ನು ತಯಾರಿಸುವುದನ್ನು ಕಲಿತರು. ಆಗಾಗ್ಗೆ ನಾನು ಅಣ್ಣಯ್ಯನ ಮನೆಗೆ ಹೋಗುತ್ತಿದ್ದೆ. ಹೀಗೆ ಹೋದಾಗಲೆಲ್ಲ ಮನೆಯ ಹಾಗು ಮನೆಯವರ ಮನೋಭಾವದಲ್ಲಿ ಜರುಗುತ್ತಿದ್ದ ಬದಲಾವಣೆಗಳನ್ನು ಸ್ಪಷ್ಟವಾಗಿ ಗಮನಿಸುತ್ತಿದ್ದೆ.

1930ನೇ ಇಸವಿಯ ಸುಮಾರಿನಲ್ಲಿ ಸೆಂಟ್ರಲ್ ಕಾಲೇಜಿನ ಸ್ನಾತಕ ಪದವಿ ತರಗತಿಗಳಲ್ಲಿ ಸುಮಾರು ಆರು ಜನ ಮಹಿಳಾ ವಿದ್ಯಾರ್ಥಿಗಳಿದ್ದರು. ಎಪ್ಪತ್ತು, ಎಂಭತ್ತು ಜನರಿದ್ದ ದೊಡ್ಡ ತರಗತಿಯಲ್ಲಿ ಇವರದು ಅಲ್ಪ ಸಂಖ್ಯೆ. ಇದರಲ್ಲಿ ಇಂಗ್ಲಿಷ್‌ನಲ್ಲಿ ಆಸಕ್ತಿಯಿರುವ ಕೆಲವರಿದ್ದರು, ವರ್ಷಕ್ಕೊಮ್ಮೆ ಬೆಳದಿಂಗಳ ಊತಣಕ್ಕೆಂದು ಇವರುಗಳನ್ನು ಶ್ರೀಕಂಠಯ್ಯನವರು ಆಹ್ವಾನಿಸುತ್ತಿದ್ದರು. ಹಾಗೆ ಕೆಲ ಆಪ್ತ ವಿಶಾಲ ಹೃದಯಿಗಳನ್ನೂ ಆಹ್ವಾನಿಸುತ್ತಿದ್ದರು. ಶಾರದೆ ಹಾಗು ತಂಗ ಹಬ್ಬದಡಿಗೆ ಮಾಡಿ ಇವರಿಗೆಲ್ಲ ಬಡಿಸುತ್ತಿದ್ದರು. ನಾನು ಇವರುಗಳೊಂದಿಗೆ ಈ ಊತಣ ಕೂಟಗಳಲ್ಲಿ ಪಾಲ್ಗೊಳ್ಳುತ್ತಿದ್ದೆ. ಅಣ್ಣಯ್ಯ ಮಿತಭಾಷಿಗರಾದರು ಈ ಊತಣಕೂಟಗಳಲ್ಲಿ ಅವರು ಎಲ್ಲರೊಂದಿಗೆ ಬಿಚ್ಚು ಮನಸ್ಸಿನಿಂದ ಎಲ್ಲ ರೀತಿಯ ವಿಷಯಗಳನ್ನೂ ಚರ್ಚಿಸುತ್ತಿದ್ದರು. ಕೆಲವೊಮ್ಮೆ ತಮ್ಮ ಮಾತುಗಳಿಂದ ಎಲ್ಲರನ್ನೂ ನಗಿಸುತ್ತಿದ್ದರು. ಇದನ್ನು ಗಮನಿಸಿದ ಕೆಲ ಸ್ನೇಹಿತರು 'ಶ್ರೀಕಂಠಯ್ಯನವರು ಎಲ್ಲರೊಂದಿಗೆ ಸಲಿಗೆಯಿಂದ ವರ್ತಿಸದೆ ತಮ್ಮ ತರಗತಿಯ ವಿದ್ಯಾರ್ಥಿನಿಯರೊಂದಿಗೆ ಮಾತ್ರ ಏಕೆ ಹೀಗೆ ವರ್ತಿಸುತ್ತಾರೆ. ಅವರ ಮನಸ್ಸಿನಲ್ಲಿ ಕೆಡುಕಿರಬಹುದೆ? ಎಂಬುದಾಗಿ ಅಣ್ಣಯ್ಯನವರನ್ನು ದೂಷಿಸುತ್ತಿದ್ದರು. ಈ ಮಾತುಗಳಿಂದ ಅಣ್ಣಯ್ಯ ಬೇಸರಗೊಳ್ಳುತ್ತಿರಲಿಲ್ಲ. ಅರವತ್ತು ಎಪ್ಪತ್ತು ಜನರನ್ನು ಆಹ್ವಾನಿಸಿ ಉಪಚಾರ ಮಾಡುವಷ್ಟು ಜಾಗ ಅವರ ಮನೆಯಲ್ಲಿರಲಿಲ್ಲ. ಅಲ್ಲದೆ ಇಷ್ಟು ಜನಕ್ಕೆ ಬೇಕಾದ ಅಡುಗೆಯನ್ನು ತಮ್ಮ ಇಬ್ಬರು ಮಕ್ಕಳಿಂದ ಮಾತ್ರ ಸಾಧ್ಯವಿರಲಿಲ್ಲ. ಈ ರೀತಿ ಊತಣಕೂಟಗಳನ್ನು ಏರ್ಪಡಿಸಿ ತಮ್ಮ ವಿದ್ಯಾರ್ಥಿನಿಯರನ್ನು ಆಹ್ವಾನಿಸಲು ಮತ್ತೊಂದು ಉದ್ದೇಶವಿತ್ತು. ಶ್ರೀಕಂಠಯ್ಯನವರು ಸ್ತ್ರೀ ಉದ್ಧಾರ, ಸ್ತ್ರೀ ಸ್ವಾತಂತ್ರ್ಯದ ಬೆಂಬಲಿಗರು. ಸ್ತ್ರೀ ಪುರುಷ ಸಮಾನಳು ಎಂದು ಅವರು ನಂಬಿದ್ದರು. ಈ ರೀತಿಯಾಗಿ ಆ ನಂಬುಗೆಯನ್ನು ಜಾರಿಗೊಳಿಸುತ್ತಿದ್ದರು, ಅಷ್ಟೆ.

ಇಂಗ್ಲಿಷ್ ಹಾಗು ಕನ್ನಡ ಭಾಷೆಗಳ ಕುರಿತ ಕೆಲಸಗಳಲ್ಲಿ ಶ್ರೀಕಂಠಯ್ಯನವರು ಆಳವಾಗಿ ತೊಡಗಿಕೊಂಡಿದ್ದರು. ಸೆಂಟ್ರಲ್ ಕಾಲೇಜಿನಲ್ಲಿ ಕನ್ನಡ ಹಾಗು ಇಂಗ್ಲಿಷ್ ಎರಡನ್ನು ಕಲಿಸುತ್ತಿದ್ದ ಶ್ರೀಯವರಿಗೆ ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದಕ್ಕೆ ಮಾತ್ರ ಸಂಬಳ ದೊರೆಯುತ್ತಿತ್ತು. ಸ್ನಾತಕ ಹಾಗು ಸ್ನಾತಕೋತ್ತರ ಕ್ರಮಗಳ ಎಲ್ಲ ವಿದ್ಯಾರ್ಥಿಗಳು ಇಂಗ್ಲಿಷ್ ಕಾವ್ಯ, ಗದ್ಯ ಹಾಗು ನಾಟಕ, ಈ ಎಲ್ಲ ವಿಭಾಗಗಳಲ್ಲಿ ಒಂದೊಂದು ಕ್ರಮವನ್ನು ಆರಿಸಿಕೊಳ್ಳಲೇ ಬೇಕಾಗಿತ್ತು. ಹಿರಿಯ ತರಗತಿಗಳಿಗೆ ಶ್ರೀಕಂಠಯ್ಯನವರು ಯಾವಾಗಲೂ ಶೇಕ್ಸ್‌ಪಿಯರ್‌ನ ಸಾಹಿತ್ಯವನ್ನು ಹೇಳಿಕೊಡಲು ಇಷ್ಟ ಪಡುತ್ತಿದ್ದರು. ಮೈಸೂರು ಮಹಾರಾಜ ಕಾಲೇಜಿನ ಮಾನವಿಕ ಶಾಸ್ತ್ರದ ವಿದ್ಯಾರ್ಥಿಗಳಷ್ಟೆ ಬೆಂಗಳೂರಿನ ವಿದ್ಯಾರ್ಥಿಗಳೂ ಇಂಗ್ಲೀಷಿನಲ್ಲಿ ಆಸಕ್ತರಾಗಿರುವುದನ್ನು ಶ್ರೀಯವರು ಗಮನಿಸಿದರು. 1941 ಮತ್ತು 1943ರ ನಡುವಿನಲ್ಲಿ ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎ. ಹಾಗು ಎಂ.ಎ. ಕ್ರಮಗಳನ್ನು ಜಾರಿಗೆ ತರುವಂತೆ ಮೈಸೂರು ವಿಶ್ವವಿದ್ಯಾನಿಲಯದ ಆಡಳಿತ ವರ್ಗಕ್ಕೆ ಮನಗಾಣಿಸಿದರು.

1940ರಲ್ಲಿ ನಾನು ಬಿ.ಎಸ್ಸಿಯ ವಿದ್ಯಾರ್ಥಿಯಾಗಿದ್ದೆ. ಶ್ರೀಕಂಠಯ್ಯನವರು ಶೇಕ್ಸ್‌ಪಿಯರ್‌ನ 'ಮರ್ಚೆಂಟ್ ಆಫ್ ವೆನಿಸ್' ನಾಟಕವನ್ನು ಹೇಳಿಕೊಡುತ್ತಿದ್ದ ತರಗತಿಯಲ್ಲಿ ಅವರ ವಿದ್ಯಾರ್ಥಿಯಾಗಿ ನಾನೂ ಕುಳಿತಿದ್ದೆ. ಶ್ರೀಯವರು ಶೇಕ್ಸ್‌ಪಿಯರ್‌ನ ಅಭಿಪ್ರಾಯಗಳನ್ನು ವಿವರಿಸುತ್ತ ನಾಟಕದಲ್ಲಿ ಬರುವ ಪಾತ್ರಗಳನ್ನು ನಟಿಸಿ ತೋರುತ್ತಿದ್ದಾಗ ವಿದ್ಯಾರ್ಥಿಗಳೆಲ್ಲ ವಿಸ್ಮಿತರಾಗಿ ಕುಳಿತಿರುತ್ತಿದ್ದುದು ನಾನು ಮರೆಯುವಂತಿಲ್ಲ ಈಗಲೂ ಶ್ರೀಕಂಠಯ್ಯನವರ ವಿದ್ಯಾರ್ಥಿಗಳು ಈ ಸಂಗತಿಗಳನ್ನು ಮೆಲುಕು ಹಾಕುತ್ತಾರೆ. ಕೆಲವು ದಿನಗಳ ಹಿಂದಷ್ಟೆ ಭೇಟಿ ಇತ್ತ ಅವರ ವಿದ್ಯಾರ್ಥಿಯೊಬ್ಬರು, ''ಸೆಂಟ್ರಲ್ ಕಾಲೇಜಿನಲ್ಲಿ ಪ್ರೊ|| ಬಿ.ಎಂ. ಶ್ರೀಕಂಠಯ್ಯ ಹಾಗು ಪ್ರೊ|| ಬಿ.ಎಸ್. ಮಾಧವರಾವ್, ಇವರಿಬ್ಬರನ್ನು ಮೀರಿಸಲು ಯಾರಿಂದಲೂ ಸಾಧ್ಯವಿರಲಿಲ್ಲ'' ಎಂದದ್ದುಂಟು. ನಾನೂ ಬಿ.ಎಸ್. ಮಾಧವರಾಯರ ಶಿಷ್ಯಳೆ. ಗಣಿತದಲ್ಲಿ ಪ್ರಬುದ್ಧ ಶಿಕ್ಷಕರೆನಿಸಿದ್ದರಲ್ಲದೆ, ಅದೇ ವಿಷಯವಾಗಿ ಗಣನೀಯ ಸಂಶೋಧನೆಯನ್ನು ಮಾಧವರಾಯರು ನಡೆಸಿದ್ದಾರೆ.

ಬೆಂಗಳೂರಿನ ಸಾಮಾಜಿಕ ಸಂದರ್ಭದ ನಡುವಿನಲ್ಲಿ ಶೀಘ್ರವಾಗಿ ವಿಕಸಿಸುವಂತಹ ಕನ್ನಡದ ಕುರಿತ ಹಲವು ಯೋಚನೆಗಳು ಶ್ರೀಕಂಠಯ್ಯನವರ ಮನಸ್ಸಿನಲ್ಲಿ ಗೂಡು ಮಾಡಿದ್ದವು. ಇದಲ್ಲದೆ ಕನ್ನಡದ ಗೌರವ ಪ್ರಾಧ್ಯಾಪಕರಾಗಿ ಕನ್ನಡ ಕುರಿತು ಅನೇಕ ಹೊಸ ಹಾಗು ಹಳೆಯ ವಿಷಯಗಳ ಬಗ್ಗೆ ಉಪನ್ಯಾಸಗಳನ್ನು ನೀಡುತ್ತಿದ್ದರು. ಈ ಉಪನ್ಯಾಸಗಳಿಗೆ ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿಗಳು ಮಾತ್ರವಲ್ಲದೆ ನಗರದ ಸಾರ್ವಜನಿಕರೂ ಹಾಜರಿರುತ್ತಿದ್ದರು. ಸೆಂಟ್ರಲ್ ಕಾಲೇಜಿನ ಗಣಿತ ವಿಭಾಗಕ್ಕೆ ಸೇರಿದ್ದ ವಿಶಾಲ ಸಭಾಂಗಣದಲ್ಲಿ ನಡೆಯುತ್ತಿದ್ದ ಈ ಕಾರ್ಯಕ್ರಮವು ಕೆಲವು ದಿನಗಳಲ್ಲೆ ಜನಪ್ರಿಯವಾಯಿತು. ಶ್ರೀಕಂಠಯ್ಯನವರು 'ಕರ್ನಾಟಕ ಸಾಹಿತ್ಯ ಪರಿಷತ್ತಿನ' ಮುಖ್ಯ/ಸದಸ್ಯರಾದರು. ಸದಸ್ಯರಾದ ಸ್ವಲ್ಪ ದಿನಗಳಲ್ಲೆ ಪರಿಷತ್ತಿನ ಉಪಕಾರ್ಯದರ್ಶಿಕತ್ವವನ್ನು ವಹಿಸಿಕೊಂಡರು. ಶ್ರೀಕಂಠಯ್ಯನವರು ಉಪಕಾರ್ಯದರ್ಶಿಗಳಾದ ಬಳಿಕ ಪರಿಷತ್ತು ಬಹಳಷ್ಟು ಪ್ರಶಂಸನೀಯ ಕೆಲಸಗಳನ್ನು ನೆರವೇರಿಸಿತು. ಕೈಗೊಂಡ ಈ ಕೆಲಸಗಳನ್ನು ಜನರು ಗುರುತಿಸಿದಂತೆಲ್ಲ ಶ್ರೀಕಂಠಯ್ಯನವರು ಹಾಗು ಪರಿಷತ್ತು ತತ್ಸಂಬಂಧ ನಾಮಗಳಂತಾಗಿ ಹೋದವು. ಭಾಷೆಯ ಏಳ್ಗೆಯ ಸಲುವಾಗಿ ಶ್ರೀಕಂಠಯ್ಯನವರು ಹಮ್ಮಿಕೊಳ್ಳುತ್ತಿದ್ದ ಹೊಸ ಯೋಜನೆಗಳು, ಕೆಲಸಗಳು, ಇವೆಲ್ಲವನ್ನು ಖಂಡಿಸುವ ಜನ ಎಂದಿನಂತೆ ಮುಂದೆ ಬಿದ್ದರೂ ಮಹಾರಾಜರನ್ನು ಮೊದಲ್ಗೊಂಡು ಸಾಕಷ್ಟು ಜನರ ಬೆಂಬಲ ಶ್ರೀಕಂಠಯ್ಯನವರ ಬಳಿ ಇದ್ದುದರಿಂದ ಅವರು ಅಷ್ಟಾಗಿ ಚಿಂತೆಗೀಡಾಗಲಿಲ್ಲ. ಇಷ್ಟು ಹೊತ್ತಿಗಾಗಲೇ ಶ್ರೀಕಂಠಯ್ಯನವರು ಕನ್ನಡಿಗರಿಗೆ ಪರಿಚಿತರೆನಿಸಿದ್ದರು. ಸೆಂಟ್ರಲ್ ಕಾಲೇಜಿನ ತಮಿಳು ಹಾಗು ತೆಲುಗು ವಿಭಾಗಗಳ ಅಧ್ಯಾಪಕರುಗಳೊಂದಿಗೆ ಸಾಹಿತ್ಯಿಕ ಚರ್ಚೆಗಳನ್ನು ಕೈಗೊಳ್ಳುತ್ತಿದ್ದರು. ಪ್ರಾಂಶುಪಾಲನಾದರೆ ವೃಥಾ ತಮ್ಮ ಮೇಲೆ ಆಡಳಿತದ ಜವಾಬ್ದಾರಿ ಬೀಳುವುದೆಂದು, ಇದರಿಂದ ಕನ್ನಡದ ಏಳ್ಗೆಗೆಂದು ಕೈಗೊಂಡಿದ್ದ ಕೆಲಸಗಳಿಗೆ ಅಡಚಣೆ ಉಂಟಾಗುವುದು ಎಂದು ಯೋಚಿಸಿದ ಶ್ರೀಯವರು ಪ್ರಾಂಶುಪಾಲರ ಹುದ್ದೆಯನ್ನೆ ನಿರಾಕರಿಸಿಬಿಟ್ಟರು.

ಬ್ರಿಟಿಷರ ಆಳ್ವಿಕೆಯ ಆ ದಿನಗಳಲ್ಲಿ ಕನ್ನಡ ಮಾತನಾಡುವ ಜನರು ಹೈದರಾಬಾದ್, ಮದ್ರಾಸ್, ಮೈಸೂರು ಹಾಗು ಮುಂಬೈ, ಈ ಬೇರೆ ಬೇರೆ ಪ್ರಾಂತ್ಯಗಳಾಗಿ ಚದುರಿ ಹೋಗಿದ್ದವು. ಇದಲ್ಲದೆ ಕೊಡಗಿನಂತಹ ಪುಟ್ಟ ರಾಜ್ಯಗಳು ಮತ್ತು ಸಣ್ಣ ರಾಜರುಗಳ ಆಳ್ವಿಕೆ ಯಲ್ಲಿದ್ದ ಇನ್ನೂ ಕೆಲವು ಸಣ್ಣ ಊರುಗಳಲ್ಲಿ ಕನ್ನಡಿಗರು ಬೇರೂರಿದ್ದರು. ಶ್ರೀಕಂಠಯ್ಯ ನವರ ಹಿರಿಮೆ ಈ ಪ್ರದೇಶಗಳಿಗೂ ಹರಡಿತ್ತು. ಇಲ್ಲಿನ ಜನನಾಯಕರುಗಳು ತಮ್ಮ ಇಲಾಖೆಗೂ ಬಂದು ಭಾಷೆಯ ಕುರಿತಾಗಿ, ಕನ್ನಡದ ಘನತೆಯನ್ನು ಸುಧಾರಿಸುವ ರೀತಿಗಳ ಕುರಿತಾಗಿ, ತಮಗೆಲ್ಲ ಮಾರ್ಗದರ್ಶನ ನೀಡಬೇಕೆಂದು ಶ್ರೀಕಂಠಯ್ಯನವರನ್ನು ಆಹ್ವಾನಿಸಿದರು. ಮುಂಬೈನಲ್ಲಿದ್ದ ಧಾರವಾಡ, ಮದರಾಸು ಪ್ರಾಂತ್ಯದ ಮಂಗಳೂರು, ಹೈದರಾಬಾದ್‌ಗೆ ಸೇರಿದ ರಾಯಚೂರು, ಹಾಗೆ ಕೊಡಗಿನಲ್ಲಿ ಮಡಿಕೇರಿ ಈ ಸ್ಥಳಗಳಿಗೆಲ್ಲ ಶ್ರೀಕಂಠಯ್ಯನವರು ಭೇಟಿ ಇತ್ತು ಉಪನ್ಯಾಸಗಳನ್ನು ನೀಡುತ್ತಿದ್ದರಲ್ಲದೆ ಚರ್ಚೆಗಳಲ್ಲೂ ಭಾಗವಹಿಸುತ್ತಿದ್ದರು. ಕೆಲವೊಮ್ಮೆ ಒಂದೆ ದಿನದಲ್ಲಿ ಮೂರು ನಾಲ್ಕು ಉಪನ್ಯಾಸಗಳನ್ನು ನೀಡುತ್ತಿದ್ದರು. ತಮ್ಮ ಉತ್ಸಾಹ ಚೈತನ್ಯಗಳಿಗೆ ಮಿತಿಯೇ ಇಲ್ಲವೆಂಬಂತೆ ದುಡಿದರು. ಇಂತಹ ಸಮಾವೇಶಗಳಲ್ಲಿ ವಿದ್ಯಾವಂತರು ಮಾತ್ರವಲ್ಲದೆ ಸುತ್ತಮುತ್ತಲಿನ ಊರುಗಳಿಂದ ಅಕ್ಷರಸ್ತರು, ಅನಕ್ಷರಸ್ತರು ಎಲ್ಲರೂ ಭಾಗವಹಿಸುತ್ತಿದ್ದರು. ಹೀಗೆ ಕನ್ನಡ ಸಾಹಿತ್ಯದ ಬಗ್ಗೆ ಅರಿವು ಮೂಡಿಸುವುದರ ಜೊತೆಗೆ ಚೂರು ಚೂರಾಗಿ ಹೋಗಿದ್ದ ಕನ್ನಡಿಗರನ್ನು ಏಕೀಕರಿಸುವ ಮಹತ್ಕಾರ್ಯದಲ್ಲು ಶಾಮೀಲಾದರು. ಕರ್ನಾಟಕ ಏಕೀಕರಣ ಚಳುವಳಿಯ ಉದ್ಧಾರಕನಾಗಿ ಅವತರಿಸಿದರು.

'ಮಹಾತ್ಮಗಾಂಧಿ, ಜವಾಹರ್‌ಲಾಲ್ ನೆಹರು ಮತ್ತಿತರ ರಾಜಕೀಯ ಮುಖಂಡರ ಹಾಗೆ ಶ್ರೀಕಂಠಯ್ಯನವರ ಮಾತುಗಳಲ್ಲಿ ರಾಷ್ಟ್ರೀಯ ಸಮಗ್ರತೆಯ ದೃಷ್ಟಿಕೋನವಿಲ್ಲ' ಎಂಬ ಟೀಕೆಯನ್ನು ಅವರು ಎದುರಿಸಬೇಕಾಯಿತು. ಆದರೆ, 'ಕರ್ನಾಟಕ ಏಕೀಕೃತವಾದರೆ ಪ್ರತಿ ಕನ್ನಡಿಗನು ನಾಡಿನ ಉತ್ತಮ ಭವಿಷ್ಯಕ್ಕಾಗಿ ಕಾರ್ಯಶೀಲನಾಗುತ್ತಾನೆ. ಕನ್ನಡ ನಾಡು ದೇಶಕ್ಕೆ ಮಾದರಿಯಾಗುತ್ತದೆ. ಈ ಪ್ರೇರಣೆ ಪ್ರತಿ ಭಾರತೀಯನಲ್ಲೂ ಕಂಡು ಸಮಗ್ರತೆಯ ಚಳುವಳಿ ಇನ್ನೂ ಬಲಿಷ್ಟವಾಗುತ್ತದೆ' ಎಂಬುದು ಶ್ರೀಯವರ ಚಿಂತನೆ.

ಶ್ರೀಕಂಠಯ್ಯನವರಿಗೆ ಇಂಗ್ಲಿಷ್ ಅಚ್ಚುಮೆಚ್ಚು. ಇಂಗ್ಲಿಷಿನವರ ದೇಣಗೆಗಳನ್ನು ಅವರು ಮುಕ್ತವಾಗಿ ಪ್ರಶಂಸಿಸುತ್ತಿದ್ದರು. ಅವರುಗಳಿಂದ ಭಾರತೀಯರು ಕಲಿಯುವುದು ಬಹಳಷ್ಟಿದೆ ಎಂದು ಶ್ರೀಯವರು ನಂಬಿದ್ದರು. ಸ್ವಾತಂತ್ರ ಪಡೆಯುವುದು ದೊಡ್ಡದಲ್ಲ, ಅದನ್ನು ಉಳಿಸಿ ಕೊಳ್ಳುವಂತಹ ಮನೋಬಲವನ್ನು ಭಾರತೀಯನು ಬೆಳೆಸಿಕೊಳ್ಳಬೇಕೆಂಬುದು ಅವರ ಚಿಂತನೆ. ಮೈಸೂರಿನ ಮಹಾರಾಜ ಶ್ರೀ ಮುಮ್ಮಡಿ ಕೃಷ್ಣರಾಜೇಂದ್ರ ಒಡೆಯರು ಶ್ರೀಕಂಠಯ್ಯನವರ ಕೆಲಸಗಳನ್ನು ಎಷ್ಟರಮಟ್ಟಿಗೆ ಮೆಚ್ಚಿದ್ದರೆಂದರೆ, ಅವರ ಪ್ರಾಧ್ಯಾಪಕ ಸೇವೆಯನ್ನು ಐದು ವರ್ಷಗಳು ಮುಂದೂಡಿದರು. 55 ವರ್ಷಗಳಿಗೆ ನಿವೃತ್ತರಾಗಬೇಕಾದವರು ಅರವತ್ತು ವರ್ಷಗಳವರೆಗೆ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು.

1944ರಲ್ಲಿ ಶ್ರೀಕಂಠಯ್ಯನವರ ಷಷ್ಟ್ಯಬ್ದಿಪೂರ್ತಿ ಸಮಾರಂಭವನ್ನು ಪರಿವಾರದವರೆಲ್ಲ ಆಚರಿಸಿದರು. ಸಮಾರಂಭ ಜರುಗಿದ ಮುಂದಿನ ದಿನವೇ ಧಾರವಾಡಕ್ಕೆ ಹೊರಟು ಅಲ್ಲಿನ

ನೂತನ ಕಾಲೇಜೊಂದರ ಪ್ರಾಂಶುಪಾಲರಾಗಿ ವೃತ್ತಿ ಆರಂಭಿಸಿದರು. ಆರೋಗ್ಯ ಹತೋಟಿಯಲ್ಲಿಲ್ಲದಿರುವಾಗ ಮತ್ತೊಂದು ಕೆಲಸಕ್ಕೆ ಕೈಹಾಕುವುದು ಉಚಿತವಲ್ಲ ಎಂದು ಸ್ನೇಹಿತರು ಕೆಲವರು ನೀಡಿದ ಸಲಹೆಯನ್ನು ತಿರಸ್ಕರಿಸಿಬಿಟ್ಟರು. ಶಾರದ ಹಾಗು ತಮ್ಮಯ್ಯ ತಂದೆಯೊಡನೆ ಧಾರವಾಡಕ್ಕೆ ಹೊರಟರು. ತಂಗ ತನ್ನ ಪರಿವಾರದೊಂದಿಗೆ ಹೈದರಾಬಾದಿನ ಬಳಿ ವಾಸವಾಗಿದ್ದಳು. ಶಾರದಾಳ ಮಕ್ಕಳು ಮೈಸೂರಿನಲ್ಲೇ ಉಳಿದರು. ವಿಶಾಲಾಕ್ಷಿ ಇಂಗ್ಲಿಷ್‌ನಲ್ಲಿ ಸ್ನಾತಕೋತ್ತರ ವ್ಯಾಸಂಗ ಮಾಡುತ್ತಿದ್ದಳು. ಶ್ರೀಕಂಠ ಮೈಸೂರಿನ ವೈದ್ಯಕೀಯ ಕಾಲೇಜಿಗೆ ಸೇರಿದ್ದ.

ಧಾರವಾಡದಲ್ಲಿ ಶ್ರೀಯವರು ಹೊಸ ಕಾಲೀಜಿನ ಸ್ಥಾಪನಾಕಾರ್ಯದಲ್ಲಿ ಬಹಳ ಉತ್ಸಾಹದಿಂದ ತೊಡಗಿಕೊಂಡರು. ಒಂದುವರೆ ವರ್ಷಗಳು ಕಳೆದಿತ್ತು. ಬಿಡುವಿಲ್ಲದ ಕೆಲಸಗಳಿಂದ ಶ್ರೀಕಂಠಯ್ಯನವರ ಆರೋಗ್ಯಕ್ಕೆ ಹಾನಿ ಉಂಟಾಗಿತ್ತು. ಮಧುಮೇಹ ಮತ್ತು ಅತಿರಕ್ತ ಒತ್ತಡಗಳಿಂದ ಹೃದಯ ಬಲಹೀನವಾಗಿತ್ತು. ದೇಹ ಶಕ್ತಿ ಕಡಿಮೆಯಾಗಿತ್ತು. ಮನೆಯಲ್ಲಿ ತಮ್ಮ ಉಪಾಂತಕರೊಬ್ಬರೊಡನೆ ಯಾವುದೋ ಮುಖ್ಯವಾದ ವಿಷಯವನ್ನು ಚರ್ಚಿಸುತ್ತಿದ್ದ ಸಮಯದಲ್ಲಿ ತೀವ್ರ ಹೃದಯಾಘಾತ ಸಂಭವಿಸಿತು. 1945ರ ಮಧ್ಯ ಕಾಲದಲ್ಲಿ ಅವರು ತಮ್ಮ ಕೊನೆಯುಸಿರೆಳೆದರು. ಆಗ ಅವರ ವಯಸ್ಸು 60 ವರ್ಷಗಳ ಸುಮಾರು. ಜೀವನದುದ್ದಕ್ಕೂ ಎಂದು ಮೈಗಳ್ಳರಾಗದೆ, ವಿಶ್ರಾಂತಿ ಬಯಸದೆ ಬದುಕಿನುದ್ದಕ್ಕೂ ಕಂಡ ದುಃಖಗಳನ್ನು ಒತ್ತಿಹಿಡಿದು ತಮಗೆ ಸಾಧ್ಯವಾದಷ್ಟು ಧ್ಯೇಯಾಕಾಂಕ್ಷೆಗಳನ್ನು ಸಾಧಿಸಿದರು. ಮಿತ ಭಾಷಿಗರಾದರು ತಮಗನ್ನಿಸಿದ್ದನ್ನು ತಕ್ಕರೀತಿಯಲ್ಲಿ ಪೂರೈಸುವ ಛಲಗಾರರಾಗಿದ್ದರು. ಶ್ರೀಕಂಠಯ್ಯನವರು ವಿಶಾಲ ಹೃದಯಿಗಳು. ಅವರು ಕಾಲ ಮೀರಿದ ಚಿಂತನ ಪ್ರಜ್ಞೆ ತಾಳಿದವರು. ಅರ್ಥವಿಲ್ಲದ ಆಚರಣೆಗಳಿಗೆ, ಮೂಢನಂಬಿಕೆಗಳಿಗೆ ಸದಾ ವಿರೋಧಿಸಿದವರು. ಕನ್ನಡದ ಉದ್ಧಾರ ಮತ್ತು ಕನ್ನಡಿಗರ ಏಕೀಕರಣ ಕೆಲಸಗಳಲ್ಲಿ ತಮ್ಮ ಸೇವೆಯನ್ನು ಗುರುತಿಸಿ ಕನ್ನಡ ಜನರು ಅವರಿಗೆ 'ಕನ್ನಡ ಕಣ್ವ' ಎಂದು ಬಿರುದು ಸಲ್ಲಿಸಿ ಗೌರವಿಸಿದರು.

ನನ್ನ ಉಪನಾಮ 'ಚಟರ್ಜಿ' ಎಂಬುದಾದ್ದರಿಂದ ನಾನು ಬಂಗಾಳದವಳು ಎಂದು ಜನ ತಪ್ಪು ತಿಳಿದುಬಿಡುತ್ತಾರೆ. ಇದೇ ಕಾರಣಕ್ಕಾಗಿ ನಾನು ಕರ್ನಾಟಕದಲ್ಲಿ ಎಲ್ಲೆ ಹೋದರೂ, ಅಲ್ಲಿನ ಜನ ನಾನು ಕನ್ನಡ ಮಾತನಾಡುವುದನ್ನು ಕೇಳಿ ಕೌತುಕರಾಗುತ್ತಾರೆ. ನಾನು ಬಿ.ಎಂ.ಶ್ರೀ.ಯವರ ಸೋದರ ಮಗಳು ಎಂದು ತಿಳಿದೊಡನೆಯೇ ಅತ್ಯಂತ ಗೌರವಾದರಗಳಿಂದ ಉಪಚರಿಸಿದ ಎಷ್ಟೋ ಸಂದರ್ಭಗಳು ಸವಿನೆನಪುಗಳಾಗಿ ಉಳಿದಿವೆ. ಬಿ.ಎಂ.ಶ್ರೀ.ಯವರು ಕನ್ನಡನಾಡಿನ ಏಕೀಕರಣವನ್ನು ಕಾಣುವ ಪೂರ್ವದಲ್ಲೇ ಅಸುನೀಗಿದರು. ನಾನು ಅವರ ಸಂಬಂಧಿ ಎಂದು ಹೇಳಿಕೊಳ್ಳುವುದು ನನಗೆ ಬಹಳ ಹೆಮ್ಮೆಯ ಸಂಗತಿಯಾಗಿದೆ. ನನ್ನಂತೆಯೇ ಕರ್ನಾಟಕದ ಎಲ್ಲೆಡೆ ಕನ್ನಡಿಗರ ಮನದಲ್ಲಿ ಬಿ.ಎಂ.ಶ್ರೀ. ನಿರಂತರವಾಗಿ ಮನೆ ಮಾಡಿರುತ್ತಾರೆ.

❑



## ಆಕಾಶ ಅಮ್ಮನಿಗಾಗಿ ಅತ್ತಾಗ

ಬಂದಿದೀನಿ ನಾನು ಅಲ್ಲಿಂದ
ನೆನಪಾಗುತಿದೆ ಎಲ್ಲರ ಹುಟ್ಟಿನಂತೆ ನನ್ನ ಹುಟ್ಟು
ನನಗೊಬ್ಬಳು ತಾಯಿ ಮತ್ತು ಅನೇಕ ಕಿಟಕಿಗಳ ಮನೆ
ಅಣ್ಣ ತಮ್ಮಂದಿರು, ಗೆಳೆಯರು ಮತ್ತು ಸೆರೆಮನೆ
ಕಡಲಕೋಳಿಗಳು ಕಿತ್ತುಕೊಂಡ ಒಂದು ಅಲೆ
ನನ್ನಲ್ಲಿದೆ ನನ್ನದೇ ದೃಷ್ಟಿ ಹುಲ್ಲುದಳದ
ಒಂದಲುಗು, ಶಬ್ದ ಶಿಖರಗಳಾಚೆ ಹೊಳೆವ ಚಂದಿರ
ಪಕ್ಷಿಗಳ ಮೂಲಕ ದೇವರು ಕಳಿಸಿದ ತಿನಿಸು
ಮತ್ತು ಕಾಲದ ಒಳಪಟ್ಟಿನಾಚೆಗೆ ಆಲಿವ್ ಮರಗಳು
ಎತ್ತಿ ಹಿಡಿದ ಆಕಾಶ
ಪಯಣ ಮಾಡಿ ಬಂದಿದೀನಿ
ಕತ್ತಿಗಳು ಶರೀರಗಳನ್ನ ಹೂಗುಚ್ಚಗಳಾಗಿ
ಪರಿವರ್ತಿಸುವ ಮೊದಲು ಈ ಭೂಮಿಯನ್ನ
ಬಂದಿದೀನಿ ಅಲ್ಲಿಂದ
ಹಿಂದಿರುಗಿಸುತ್ತೇನೆ ಆಕಾಶವನ್ನ ಅದರ ಅಮ್ಮನಿಗೆ
ಆಕಾಶ ತನ್ನ ಅಮ್ಮನಿಗಾಗಿ ಅತ್ತಾಗ
ಮತ್ತು ಅಳುತ್ತೇನೆ ನನ್ನ ನಾನರಿಯಲು
ಮರಳುತ್ತಿರುವ ಮುಗಿಲಿಗಾಗಿ
ಕಲಿತಿದ್ದೇನೆ ನಿಯಮಗಳ ಮುರಿಯಲು
ನ್ಯಾಯಾಲಯಗಳ ರಕ್ತಸಿಕ್ತ ಭಾಷೆ
ಮತ್ತು ಬಿಚ್ಚಿ ಬಿಟ್ಟಿದ್ದೇನೆ ಎಲ್ಲ ಲೋಕಗಳನ್ನ
ಒಂದು ಮನೆಯಾಗಿ ಕಟ್ಟಲು.

ಮಹಮೂದ್ ಡಾರ್ವಿಷ್
ಅರೆಬ್‌ನಿಂದ ಇಂಗ್ಲೀಷ್‌ಗೆ:
ಮುನೀಶ್ ಆಕಾಶ್
ಮತ್ತು ಕ್ಯಾರೊಲಿನ್ ಫೋರ್ಷ್
ಕನ್ನಡಕ್ಕೆ: **ಎಲ್ಸಿ. ನಾಗರಾಜ್**

ಮೊದಲ ಸಂಕಿರಣಕ್ಕೆ ಬಂದ ಅತ್ಯುತ್ತಮ ಪ್ರತಿಕ್ರಿಯೆ ನಮ್ಮ ಉತ್ಸಾಹ ಮತ್ತು ಜವಾಬ್ದಾರಿಗಳನ್ನು ಹೆಚ್ಚಿಸಿದೆ.

ಸಂಕಿರಣದ ಎರಡನೆಯ ಪ್ರಯೋಗವಾಗಿ ಕವಿ ಜಿ.ಕೆ. ರವೀಂದ್ರ ಕುಮಾರ್ ಅವರ ಕಾವ್ಯದ ಅಭ್ಯಾಸ ಇಲ್ಲಿದೆ.

೧೯೬೨ರಲ್ಲಿ ಹುಟ್ಟಿದ ರವೀಂದ್ರ ಕುಮಾರರು ಈತನಕ ಮೂರು ಗಮನಾರ್ಹ ಕವನ ಸಂಕಲನಗಳನ್ನು ಹೊರತಂದಿದ್ದಾರೆ. ಸಿಕಾಡ (೧೯೯೪), ಪ್ಯಾಂಜಿಯಾ (೧೯೯೭) ಮತ್ತು ಕದವಿಲ್ಲದ ಊರಲ್ಲಿ (೨೦೦೧). ತಮ್ಮ ಮೂರೂ ಸಂಕಲನಗಳ ಮೂಲಕ ಕಾವ್ಯಾಸಕ್ತರ ಗಮನ ಸೆಳೆದಿರುವ ರವೀಂದ್ರ ಕುಮಾರ್ ಚಿತ್ರದುರ್ಗ ಜಿಲ್ಲೆ ಹೊಳಲ್ಕೆರೆ ತಾಲ್ಲೂಕು ಗುಂಜಿಗನೂರಿನವರು. ಶಿಕ್ಷಣ ಶಾಸ್ತ್ರದಲ್ಲಿ ಮೈಸೂರು ವಿಶ್ವವಿದ್ಯಾಲಯದಿಂದ ಸ್ನಾತಕೋತ್ತರ ಪದವಿ ಪಡೆದು, 'ಆಕಾಶವಾಣಿ'ಯಲ್ಲಿ ಉದ್ಘೋಷಕರಾಗಿ, ಕಾರ್ಯನಿರ್ವಾಹಕ ರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇದೀಗ ಮೈಸೂರು ಕೇಂದ್ರದಲ್ಲಿ ಸೇವೆಯಲ್ಲಿರುವ ರವೀಂದ್ರ ಕುಮಾರ ಯಾವ ಪಂಥ, ಸಿದ್ಧಾಂತಗಳ, ಚಳುವಳಿಗಳ ಮುಖವಾಣಿಯಗದೆ · ಬದುಕು ಕೊಟ್ಟದ್ದನ್ನ ಕಾವ್ಯದಲ್ಲಿ ಮೊಗೆದುಕೊಡುವ ಸೂಕ್ಷ್ಮ ಸಂವೇದನೆಯ ಕವಿ.

ಪ್ರಶಸ್ತಿಗಳ ಸಾಲು ಸಾಲು ರವೀಂದ್ರ ಕುಮಾರರ ಕಾವ್ಯಕ್ಕೆ ಸಂದ ಮನ್ನಣೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕನ್ನಡ ಸಾಹಿತ್ಯ ಪರಿಷತ್ತಿನ ದತ್ತಿನಿಧಿ ಬಹುಮಾನ, ಸಾರಂಗಮಠ ಪ್ರಶಸ್ತಿ, ವಾರಂಬಳ್ಳಿ ಪ್ರಶಸ್ತಿ, ಮುದ್ದಣ ಕಾವ್ಯ ಪ್ರಶಸ್ತಿ, ಕಡೆಂಗೋಡ್ಲು ಕಾವ್ಯ ಪ್ರಶಸ್ತಿ, ರಿಸರ್ವ್ ಕನ್ನಡ ಸಂಘದ ಬೆಳ್ಳಿಹಬ್ಬದ ಪುರಸ್ಕಾರ... ಹೀಗೆ ಹಲವು ಗೌರವಕ್ಕೆ ಪಾತ್ರರಾಗಿದ್ದಾರೆ. ಅವರ ಮೊದಲ ಸಂಕಲನ 'ಸಿಕಾಡ' ಪ್ರಕಟಿಸಿದ ಹೆಮ್ಮೆ ಸಂಚಯದ್ದು.

ತೆರೆದ ಮನಸ್ಸಿನ ಈ ಕವಿಯ ಬಗೆಗೆ ಮೂವರು ಕಾವ್ಯಾಭ್ಯಾಸಿಗಳು - ಕವಿಗಳು ಗಮನಿಸಿರುವ ಕೆಲವು ಒಳನೋಟಗಳು ಇಲ್ಲಿವೆ.



# ಸಿಕಾಡ:
# ಧ್ಯಾನದ ಅರಿವಿನಲ್ಲಿ ಪ್ರಶ್ನೆಗಳ ಹಾಡು

**ವೆಂಕಟ್ರಮಣ ಗೌಡ**




ನಮ್ಮ ಸಮಾಜ, ನಮ್ಮ ಔದ್ಯೋಗಿಕ ವಾತಾವರಣ, ಆರ್ಥಿಕವಾಗಿ ನಮ್ಮ ಅಪೇಕ್ಷೆಗಳು, ನಮ್ಮ ಮಾರುಕಟ್ಟೆ, ನಮ್ಮ ಸಂವಹನ ಮಾಧ್ಯಮ-ಇವೆಲ್ಲವೂ ಸೇರಿದಂತೆ ನಮ್ಮ ಇಡೀ ಪರಿಸರವೇ ಒಂದು ವಿಚಿತ್ರ ಹುಚ್ಚಿಗೆ ಸಿಕ್ಕಂತಹ ವೇಗದಲ್ಲಿರುವುದು ನಮಗಿಂದು ಹೊಸ ಸಂಗತಿಯಾಗಿ ಕಾಣಿಸುತ್ತಿಲ್ಲ. ಇಂಥ ಹೊತ್ತಿನಲ್ಲಿ, ಕವಿತೆಯಂಥ ನಮ್ಮ ಸೃಜನಶೀಲ ಅಭಿವ್ಯಕ್ತಿ ಕೂಡ ನಮ್ಮ ವ್ಯವಹಾರದ ಜಗತ್ತಿನ ಭಾಗ ಎಂದೇ ಅನ್ನಿಸುತ್ತದೆ. ಹೀಗೆ ಹೇಳುವಾಗ ನಾನು 'ವ್ಯವಹಾರ' ಎನ್ನುವುದನ್ನು ಭಾವನಾತ್ಮಕ ಮತ್ತು ಸಾಂಸ್ಕೃತಿಕ ಎಂಬೆರಡು ಪ್ರಧಾನ ಸ್ವರೂಪಗಳಲ್ಲಿ ಗುರುತಿಸಿಕೊಳ್ಳುತ್ತಿದ್ದೇನೆ. ಇದನ್ನೇ ವೈಯಕ್ತಿಕತೆ ಮತ್ತು ಸಾರ್ವತ್ರಿಕತೆ ಎಂದುಕೊಂಡರೂ ಆಗುತ್ತದೆ.

ಹಾಗೆ ನೋಡಿದರೆ ಬಹುಶಃ ನಮ್ಮ ಕಾವ್ಯದ ಚರಿತ್ರೆ ಈ ವೈಯಕ್ತಿಕತೆ ಮತ್ತು ಸಾರ್ವತ್ರಿಕತೆ ಎಂಬವುಗಳ ಪ್ರವರ್ತಿಸುವಿಕೆಯೂ ಆಗಿದೆ. ಕಾವ್ಯದಂಥ ಸಂಗತಿಯ ವಿಶಿಷ್ಟತೆಯೇ-ವೈಯಕ್ತಿಕ ತುರ್ತಾಗಿರುತ್ತಲೂ, ವೈಯಕ್ತಿಕತೆಯನ್ನು ಮೀರಿ ಪಡೆದ ಆಯಾಮವಿದೆಯಲ್ಲ; ಅದು. ಯಾವುದೇ ಪ್ರಮುಖ ಕಾವ್ಯವು ಬದುಕಿನ ಕುರಿತ ಗ್ರಹಿಕೆಯಲ್ಲೇ ತಲೆದೋರುವುದಾದ್ದರಿಂದ ಅದು ಸ್ವಗತವೂ ಹೌದು. ಸಂವಾದವೂ ಹೌದು.

ಜಿ.ಕೆ. ರವೀಂದ್ರ ಕುಮಾರ್ ಅವರು 'ಸಿಕಾಡ' ಎಂಬ ತಮ್ಮ ಮೊದಲ ಕಾವ್ಯ ಸಂಗ್ರಹದಲ್ಲೇ ಕಾವ್ಯಾಸಕ್ತರಲ್ಲೊಂದು ಬೆರಗು, ಭರವಸೆಯನ್ನು ಮೂಡಿಸಿದ್ದು ಇಂಥ ಸಂವಾದಕ್ಕೆ ಪ್ರೇರೇಪಿಸಬಲ್ಲ ಸ್ವಗತ ಮತ್ತು ಸ್ವಗತವನ್ನು ಆಲಿಸಬಲ್ಲ ಸಂವಾದದ ಗುಣವನ್ನು ಅಂತರ್ಗತವಾಗಿಸಿಕೊಂಡ ಕವಿತೆಗಳಿಂದಾಗಿ.

ಈ ಸಂಗ್ರಹದ ಕವಿತೆಗಳು ರವೀಂದ್ರ ಕುಮಾರರ ಎಷ್ಟೋ ಸಮಯದ ಬರವಣಿಗೆಯಲ್ಲ; 'ಆದರೆ ಬಹಳಷ್ಟು ಸಮಯದಿಂದ ಚಿಂತಿಸಿದ ಪರಿಣಾಮ. ಒಂದು ಕವಿತೆ ಕೈಗೆ ಬರುವ ಕ್ಷಣ ಒಂದು ಚರಿತ್ರೆಯಲ್ಲಿ ನಡೆದು ಬಂದದ್ದಾಗಿರುವುದಾದದರೆ, ತನಗಿಂತಲೂ ಹಳೆಯ ಇದೆಷ್ಟೋ ಕ್ಷಣಗಳ ಸ್ಪರ್ಶ ಮತ್ತು ಗಂಧದ ಪರಿಚಯವುಳ್ಳದ್ದಾದರೆ ಅಂಥ ಕವಿತೆ ನಾಳೆಗಾಗಿ ಮನಸ್ಸು ತೆರೆಯಬಲ್ಲಂಥದ್ದಾಗಿರುತ್ತದೆ; ಮಾತು ಕೊಡಬಲ್ಲಂಥದ್ದಾಗಿರುತ್ತದೆ. 'ಸಿಕಾಡ'ದ ಹೆಚ್ಚಿನ ಕವಿತೆಗಳು ಈ ಕಾರಣಗಳಿಂದಾಗಿಯೇ ನನ್ನಂಥ ಕಿರಿಯನಿಗೆ ಭರವಸೆಯ ದಾರಿಯ ಬಗ್ಗೆ ಹೇಳುವಂಥವಾಗಿವೆ.

'ಸಿಕಾಡ'ದ ಕವಿತೆಗಳು ಪುರಾಣಗಳನ್ನು, ಧರ್ಮಗಳನ್ನು, ತತ್ವವನ್ನು, ಆಧ್ಯಾತ್ಮವನ್ನು ಮಾತನಾಡಿಸುತ್ತದೆ. ನಿಜದ ರೂಹಿಗಾಗಿ ಇವೆಲ್ಲವುಗಳ ಬಳಿ ಕೇಳುತ್ತವೆ. ಇವತ್ತಿನ ವಿಲಕ್ಷಣತೆ, ವಿಷಣ್ಣತೆಗಳ ರಕಮಿನಲ್ಲಿ ಯಾರ-ಯಾವುದರ ಪಾಲು ಎಷ್ಟು ಬದುಕು ಎಡವಿದ್ದು ಯಾವುದರ ಮುಲಾಜಿನಲ್ಲಿ ಮತ್ತು ಯಾವ ಗಳಿಗೆಯಲ್ಲಿ ಎಂದೆಲ್ಲ ಕೇಳಿಕೊಂಡು ಹೊರಡುವ ಇಲ್ಲಿನ ಕವಿ, ಇದ್ದಕ್ಕಿದ್ದಂತೆ ನಮ್ಮೆಲ್ಲರ ಅನುಮಾನಗಳನ್ನು ಎತ್ತರದ ಧ್ವನಿಯಲ್ಲಿ ಬಿತ್ತರಿಸಿದವನಾಗಿ ಕಾಣುತ್ತಾನೆ. ಹೀಗೆ ಧ್ವನಿಯಾಗುವ ಪ್ರಕ್ರಿಯೆಯಲ್ಲೇ ಈ ಕವಿತೆಗಳ ಪ್ರಾಣ ನಮ್ಮ ಅನುಭವಕ್ಕೆ ಸಿಗುತ್ತದೆ.

'ನಿನ್ನ ಧ್ಯಾನದ ಅರಿವು ನಿನಗಿಹುದೇ ಸಿಕಾಡ' ಎಂದು ಕವಿ 'ಸಿಕಾಡ' ಕವಿತೆಯಲ್ಲಿ ಕೇಳುವುದು ಎಷ್ಟು ಗಾಢವಾಗಿದೆಯೆಂದರೆ, ಅದು ಇಡೀ ಸಂಗ್ರಹದ ಆತ್ಮವೆಂಬಂತೆ ಕೇಳಿಸುತ್ತದೆ. ಹದಿನೇಳು ವರ್ಷಗಳ ಕಾಲ ಭೂಮಿಯೊಳಗೇ ಅಡಗಿದ್ದು ಮೇಲೆ ಬರುವ, ಜೀಂವ್ ಎಂದು ನಿರಂತರ ಸದ್ದು ಮಾಡುತ್ತ ಒಂದು ತಿಂಗಳು ಮಾತ್ರವೇ ಬದುಕಿರುವ 'ಸಿಕಾಡ' ಎಂಬ ಕೀಟವನ್ನು, ನಮ್ಮದೇ ಚರಿತ್ರೆ, ನಮ್ಮದೇ ತಲ್ಲಣ, ನಮ್ಮ ಇರುವಿಕೆಯ ಕುರಿತ ನಮ್ಮ ತಿಳುವಳಿಕೆಯ ಮಿತಿಯನ್ನು ಇನ್ನಿಲ್ಲದಷ್ಟು ನಿಚ್ಚಳವಾಗಿ ಕಟ್ಟಿಕೊಡುವ ರೂಪಕ ವನ್ನಾಗಿಸಿದ್ದಾರೆ ಕವಿ.

ನಿನ್ನ ಮೌನದ ಯುಗವು ಉರುಳಿತೆಲ್ಲಿ
ಈ ಸದ್ದುಗದ್ದಲವೆ ಬದುಕಾಯಿತಿಲ್ಲಿ
ಜನಕಾಡ ಗೌಜಿನಲಿ ಅಡಗಿರುವೆ ಎಲ್ಲಿ
ಕಾಡದಿರು ಸಿಕಾಡ
ಕಣ್ಣ ಮುಂದಿನ ನಿಗೂಢ

ಸಿಕಾಡದೊಂದಿಗೆ ಸಂವೇದಿಸುವ ಕವಿತೆ ಒಮ್ಮೆಲೆ, 'ನಮ್ಮೆದೆಯ ಸಿಕಾಡ'ದೆಡೆಗೆ ತೆರೆದು ಕೊಳ್ಳುತ್ತದೆ. ಆತ್ಮವಿಮರ್ಶೆ ಕಾಣಿಸಿಕೊಳ್ಳುವುದು ಆಗಲೇ-

ನಿನ್ನ ಧ್ಯಾನದ ಅರಿವು ನಮಗಿಹುದೇ ಸಿಕಾಡ
ನಮ್ಮ ಹಾದಿಯ ತಿಳಿವು ನಮಗಿಹುದೇ ಸಿಕಾಡ?

ಇಂಥ ಆತ್ಮವಿಮರ್ಶೆಯ ಹಂತಕ್ಕೇರಲು ಸಾಧ್ಯವಾಗಿರುವುದು ಮಾತ್ರ ಧ್ಯಾನದ ಅರಿವಿನಿಂದಾಗಿಯೇ. ಹಾಗಾಗಿಯೇ ಹುಡುಕಾಟಕ್ಕೆ ತನ್ನನ್ನು ತಾನು ಒಪ್ಪಿಸಿಕೊಂಡಿರುವ ಕಾವ್ಯ ಜಿ.ಕೆ. ರವೀಂದ್ರಕುಮಾರ್ ಅವರದು. ಅದು, ಧ್ಯಾನದ ಅರಿವಿನಲ್ಲಿ ಹದಗೊಂಡ ಪ್ರಶ್ನೆಗಳ ಹಾಡು.

ನಮ್ಮನ್ನು ಬಿಡದೆ ಕಾಡುವ ಅನಂತ ವಿಷಾದದ ಛಾಯೆಯನ್ನು ಇವರ ಕವಿತೆಗಳು ಮತ್ತೆ ಮತ್ತೆ ಕಾಣಿಸುತ್ತವೆ ಎಂಬುದು ಮತ್ತೊಂದು ಗಮನಾರ್ಹ ಸಂಗತಿ. ಎಂಥದೋ ಬೇಗುದಿ, ಏನೋ ತಳಮಳ - ಅದೆಲ್ಲವೂ ಕೂಡಿಕೊಂಡ ಒಂದು ಭೀತಿ ತುಂಬಿದಂಥ ವಾತಾವರಣ ಈ ಕವಿಯನ್ನು ಕಾಡುತ್ತಲೇ ಇದೆ. ಅದು ಅಭಿವ್ಯಕ್ತಿ ಪಡೆದಲ್ಲಿ ಇಡೀ ಮನುಷ್ಯ ಸಮುದಾಯದ ಬಗೆಗಿನ ಕಳಕಳಿ ಗೋಚರವಾಗಿದೆ.

ಜೀವವಿಕ್ಕುವ ಮಡಿಲು ಒಬ್ಬಂಟಿ ಅಲೆಯುತಿದೆ
ತನ್ನೆಲ್ಲ ತೆರೆಯುತ್ತ ಮರೆಯುತ್ತ ನರಳುತ್ತ
ಕನಸ ನುಗ್ಗಿದ ಹೂವ ಕಣ್ಣಲ್ಲಿ ಅರಸುತ್ತಿದೆ.
ಹಾಡ ದಿಕ್ಕನು ಹಿಡಿದು ಹಾಡಿ ಸವೆಸುತ್ತ.

- ಎನ್ನುವಾಗ, ನಡೆದಿರುವ ಪಯಣದ ಗುರುತೇ ಸಿಗದ ದಿಕ್ಕಿನ ಚಿತ್ರ ಎದೆ ಕಲಕುತ್ತದೆ.

ಜಿ.ಕೆ. ರವೀಂದ್ರ ಕುಮಾರರ ಭಾಷೆಗಿರುವ ಕಸುವೇ ಅಂಥದು. ಅವರ ಕವಿತೆಗಳ ಪರಿಣಾಮಕಾರಿತ್ವದಲ್ಲಿ ಅದಕ್ಕಿರುವ ಸೂಕ್ಷ್ಮ ವಿಡಂಬನೆಯ ತಾಕತ್ತಿನ ಪಾತ್ರ ದೊಡ್ಡದು.

ಸತ್ಯವನ್ನು ಮೆಲುದನಿಯಲ್ಲಿ ಉಲಿದ
ಧರ್ಮ ಕಾರ್ಯ ಧರ್ಮದ ನಾಡಲಿ
ಅಧರ್ಮದ ಮಾತೆಲ್ಲಿ?

- ಎಂದು ಕೇಳುವಲ್ಲಿನ ಧಾಟಿಯಿದೆಯಲ್ಲ, ಅದು ನಮ್ಮಿಡೀ ಪೂರ್ವಮಾನಗಳನ್ನು ನಡುಗಿಸಿಹಾಕುವಂಥದು. ಹಾಗಾಗಿಯೇ,

ತುಟಿಯಾಚೆಗಿನ ಸುಳ್ಳು
ಹಲ್ಲೊಳಗಿನ ನಿಜವು
ನಮ್ಮನಾಳುವುದಿಲ್ಲ,

- ಎಂದು ವಾಸ್ತವವನ್ನು ಬಯಲುಗೊಳಿಸುವ ಮತ್ತು,

ಸುಳ್ಳು ಕಟ್ಟಿದ ಬೇಲಿಯಲ್ಲಿ
ಶತಮಾನದ ಸತ್ಯಗಳು
ಮಗ್ಗುಲು ಮುರಿಸಿಕೊಳ್ಳುವಾಗ
ಸತ್ಯವೇ
ನೀ ಗೆಲ್ಲುವುದು ಎಲ್ಲಿ?

- ಎಂದು ಯೋಚಿಸುವ ನಿಷ್ಠುರತೆ ಅವರ ಕಾವ್ಯಕ್ಕೆ ದಕ್ಕಿರುವುದು.

ಚಿಂತನೆ, ಆದರ್ಶಗಳು - ಇವೆಲ್ಲವೂ ಸೇರಿದ ವೈಯಕ್ತಿಕತೆ, ಸಾರ್ವತ್ರಿಕತೆಯಾಗದೇ ಹೋಗುವ, isolate ಆಗುತ್ತಿರುವ ದುರಂತವನ್ನು ಕವಿ ಎಷ್ಟು ಸಮರ್ಥವಾಗಿ ಕೆಲವೇ ಪದಗಳಲ್ಲಿ ಹಿಡಿದುಕೊಡುತ್ತಾರೆ ನೋಡಿ:

ಅವರಿವರ ಕತ್ತಲಲಿ
ಅವರವರ ಕನಸುಗಳು ಚಲಿಸುವಾಗ
ಇತರರು ಕಾಣುವುದು ಹೇಗೆ?

ಹೀಗೆಲ್ಲಾ ಪ್ರತ್ಯೇಕವಾಗಿ ಹೋಗುತ್ತಿರುವುದರ ಕುರಿತೇ ಕವಿ ಗಾಢವಾಗಿ ಚಿಂತಿಸಿದ್ದರ ಫಲವೇನೋ ಎಂಬಂತೆ ಕಾಣಿಸುವುದು, ಈ ಸಂಗ್ರಹದ ಮಹತ್ವದ ಕವಿತೆಳಲ್ಲೊಂದಾದ 'ಕರೆವ ಕಾಲ ಬರದಿರಲಿ'.

ಈ ಕವಿತೆ ಕೃಷ್ಣ ಮತ್ತು ರಾಧೆಯ ನಡುವಿನ ಸಂವಾದ ಸೂತ್ರವಾಗಿ ಉಳಿಯದೆ, ಪ್ರಶ್ನೆಗಳ ಜಗತ್ತು ಮತ್ತು ಉತ್ತರಗಳ ಜಗತ್ತಿನ ಮುಖಾಬಿಲೆಯಾಗಿ ಬೆಳೆದಿದೆ. ಪ್ರಶ್ನೆಗಳ ಜಗತ್ತಿನಲ್ಲಿ ಜೀವನದ ಬಗೆಗಿನ ಮಧುರ ಆಸೆಗಳು, ಕಕ್ಕುಲಾತಿ, ಎಲ್ಲೋ ಏನನ್ನೋ ಕಳೆದುಕೊಂಡ ವಿಷಾದ, ಭಾವಕ್ಕಾದ ನೋವಿನ ನಿವೇದನೆಗಳಿದ್ದರೆ; ಉತ್ತರಗಳ ಜಗತ್ತಿನಲ್ಲಿ ಸ್ವಸಮರ್ಥನೆ, 'ನಾನು' ಎಂಬುದು ತುಂಬಿದೆ. ಕಡೆಗೂ ಮನಸ್ಸು ತುಂಬುವುದು ರಾಧೆ ತನವೇ. ಅದು ಪ್ರಶ್ನೆಗಳ ಜಗತ್ತು; ಮಾರ್ದವದ ಜಗತ್ತು.

ಹೋಗುವವರು ನೀವು
ರಾಧೆಯರ ಸ್ಫೂರ್ತಿಯಾಗಿಸಬೇಡಿ
ಉಸಿರ ಮಾತುಗಳಾಗಿಸಿ
ದಿಕ್ಕುದಿಕ್ಕಿಗೆ ಜೀವ ನೀಡಿದಿರಿ ನೀವು
ದಿಕ್ಕುಗಾಣದ ರಾಧೆಯರ ತಿಲಕ ಧರಿಸಿ.

ರವೀಂದ್ರ ಕುಮಾರರ ಚಿಂತನೆ ಎಷ್ಟೊಂದು ಸೂಕ್ಷ್ಮ ನೆಲೆಗಳಲ್ಲಿ ನಡೆದಿದೆ ಎಂಬುದಕ್ಕೆ ಇಂಥ ಸಾಲುಗಳೇ ಸಾಕ್ಷಿಯಾಗಿದೆ. ಇಲ್ಲಿ ಯಾವ ಸಂವೇದನೆ ಇಲ್ಲ ಹೇಳಿ?

ಹಾಗೆಂದು, ರವೀಂದ್ರ ಕುಮಾರರ ಈ ಸಂಕಲನದ ಕವಿತೆಗಳಲ್ಲಿ ಮಿತಿಗಳೇ ಇಲ್ಲವಾ? ಇವೆ. ಆದರೆ ಅವುಗಳ ಬಗ್ಗೆ ಪ್ರಸ್ತಾಪಿಸುವ ಅಗತ್ಯವೀಗ ಕಾಣಿಸುತ್ತಿಲ್ಲ. 'ಸಿಕಾಡ'ದ ನಂತರ ಅವರ ಮತ್ತೆರಡು ಸಂಕಲನಗಳು ಬಂದಾಗಿದೆ. ಅವರದೇ ಆದ ಆಲೋಚನೆಯ ಕ್ರಮವೊಂದು ಗಟ್ಟಿಯಾಗಿ ಕಂಡಿದೆ. ಅವರು ಬರೆದ ಒಳ್ಳೆಯ ಕವಿತೆಗಳಿಗಿಂತ ನನ್ನ ಈ ಟಿಪ್ಪಣಿ ಹೆಚ್ಚಿನದಲ್ಲ ಎಂಬ ಎಚ್ಚರವನ್ನು ನಾನು ಪ್ರೀತಿಸುತ್ತೇನೆ. ಯಾಕೆಂದರೆ, ನಾನೂ ರಾಧೆಯ ಮಾರ್ದವದ ಜಗತ್ತಿನವನು.

❑



# ಪ್ಯಾಂಜಿಯಾ ಹಾಗೂ ಮುಗಿಯದ ಮೆಟ್ಟಿಲುಗಳು

ವಾಸುದೇವ ನಾಡಿಗ್



ಕಾವ್ಯಕ್ಕೆ ವಿರಾಮವಿಲ್ಲ. ಕಾವ್ಯ ಒಮ್ಮುಖವಲ್ಲ. ಕಾವ್ಯದ ಅರ್ಥ ಬಾಹುಳ್ಯತೆಯೇ ಅದರ ಅಂತರಂಗವನ್ನು ಗಟ್ಟಿಗೊಳಿಸುತ್ತದೆ. ಕವಿಯ ಅಂತರಂಗದ ಮೆಲುಮಾತು ಮತ್ತು ಹೊರಗಣದ ಗದ್ದಲ ಎರಡರ ಮಧ್ಯೆ ಕವಿತೆ 'ಇಡಿ' ಆಗುತ್ತದೆ. ಹಾಗೆ ಈ 'ಇಡಿ'ಯನ್ನು ಹಿಡಿದೇವೆಂಬ ಭ್ರಮೆಯೂ ಅಣಕಿಸುತ್ತದೆ. ಕವಿತೆಯೊಂದರಲ್ಲಿ, ಕಣ್ಣು ತೆರೆದಷ್ಟು ಆಕಾಶ. ನಡೆದಷ್ಟೂ ಭೂಮಿ, ಮಿಡಿದಷ್ಟೂ ಭಾವ. ಯಾವುದೇ ಭಾಷೆಯ ಕಾವ್ಯ ಪರಂಪರೆಯ ಬಗ್ಗೆ ಮಾತಾಡಿದರೂ ಇವು ಹೊರತಲ್ಲ. ಹಾಗೇ ಕನ್ನಡ ಕಾವ್ಯ ಸಂವೇದನೆಗಳೂ ಕೂಡಾ ಆಯಾ ಸಂದರ್ಭಗಳಲ್ಲಿ ಮೂಡಿನಿಂತ 'ರೂಪಕ'ಗಳೇ ಆಗಿವೆ. ಹಾಗಾಗಿ ರೂಪಕಗಳಿಗೆ ನಿಲುಗಡೆ ಇಲ್ಲ.

ಈ ಹೊತ್ತಿನ ಕಾವ್ಯ ತುಂಬಾ ನಿಚ್ಚಳವಾದದ್ದು. ವಸ್ತು ಬಾಹುಳ್ಯತೆ ಮತ್ತು ಚಿಂತನಾ ಕ್ರಮಗಳಲ್ಲಿ ಪಕ್ವಾಗುವಂಥದ್ದು. ಸಂದರ್ಭದ ಅನಿವಾರ್ಯತೆ, ಪರಾಕು, ಪ್ರತಿಷ್ಠೆ, ದೈನ್ಯತೆ, ದೈವಿಕ ಶ್ರದ್ಧೆ, ಪ್ರಕೃತಿನಿಷ್ಠೆ, ಅಂತರ್ಮುಖಿತ್ವ, ಹೋರಾಟ ಸಿದ್ಧಾಂತ... ಎಲ್ಲದರ ಈಚೆ ಬೆಳೆಯುತ್ತಿರುವ ಇದರ ಆಂತರ್ಯದ ಗುಣ ಲವಲವಿಕೆ ಮತ್ತು ಹುಡುಕಾಟವೇ ಆಗಿದೆ. ತನ್ನೊಳ ಮತ್ತು ಹೊರಗಿನ ಎಲ್ಲ ದ್ವಂದ್ವಗಳನ್ನು ಮೆಟ್ಟಿ ನಿಲ್ಲಬೇಕಾದ ಕವಿಗೆ ಈ ಸಂದರ್ಭ ಸವಾಲೇ ಸರಿ. ಕಾವ್ಯದ ಹೊಸ ಆಯಾಮ ಮತ್ತು ಸಾಧ್ಯತೆಗಳ ಕುರಿತು ವಿಶ್ಲೇಷಣೆ ನಡೆಸುವ ಕವಿ ವ್ಯಾಖ್ಯಾನಕಾರನಾಗುತ್ತಿರುವುದು ಒಪ್ಪಿಕೊಳ್ಳಲೇಬೇಕು. ಇದು ತುಂಬಾ ಅಪ್ಯಾಯಮಾನ ಸಂಗತಿಯೂ ಹೌದು. ಹೀಗಾದಾಗ ಕಾವ್ಯವು ಹೊರೆಯಾಗುವ ಬದಲು ಅರಿವಿನ ವಲಯವನ್ನು ಮೊನಚುಗೊಳಿಸುವ ಪರಿಕರವಾಗುತ್ತದೆ. ಕವಿ ಕಾವ್ಯದ ಮೂಲಕ ಕಟ್ಟಿಕೊಡುವ ಅನುಭವ ದಕ್ಕುವುದು ಅವರವರ ಅರಿವಿನ ಪಾತ್ರಕ್ಕೆ ಸಂಬಂಧಿಸಿದುದು. ಪ್ರೀತಿ, ಅನುಭಾವ, ತತ್ವ, ತರ್ಕ ಎಲ್ಲವನ್ನು ಆಯಾ ಮನಃಸ್ಥಿತಿಯ 'ವಾಂಛೆ'ಗನುಗುಣ ಹಂಚಬಲ್ಲದು ಹಾಗೆಂದೇ,

'ಅವರವರ ಸತ್ಯಕ್ಕೆ
ನೂರೆಂಟು ದಿಕ್ಕುಗಳಿರುವಾಗ'

ಕವಿತೆ ದಿಕ್ಕುಪಾಲಾಗದೆ ತಲುಪಬೇಕಾದ ದಿಕ್ಕುಗಳಿಗೆ ಅಷ್ಟಷ್ಟೇ ತಲುಪುತ್ತದೆ!

ಅತ್ಯಾಧುನಿಕತೆಯ ಎಲ್ಲ ಖುಷಿ ಮತ್ತು ಸಂಕಟಗಳನ್ನು ಎದುರಿಸುತ್ತಿರುವ ಈ ಸಂದರ್ಭದಲ್ಲಿ ಕಾವ್ಯವೂ ಕೂಡಾ ತನ್ನ ಪಾಡಿಗೆ ತಾನು ಸ್ವಚ್ಛಂದ ನಿಲುವನ್ನು ಅದರ ಪಾಡಿಗೆ ಅದು

ಕಂಡುಕೊಳ್ಳುವಲ್ಲಿ ನಿರತ. ಅದರಲ್ಲಿಯೂ ಕಳೆದ 10-12 ವರ್ಷಗಳಲ್ಲಿ ಕವಿತೆಯ ಆಯಾಮ ಗಳಲ್ಲಿ ಕಂಡುಬರುತ್ತಿರುವ ಹೊಸತನ ಮತ್ತು ವಿಲಕ್ಷಣತೆಗಳನ್ನು ಕಡೆಗಣಿಸುವಂತೆಯೇ ಇಲ್ಲ. ಜಿ.ಕೆ. ರವೀಂದ್ರಕುಮಾರರ ಕಾವ್ಯದ 'ಪಲಕು'ಗಳು ಇಂತಹ ಸಂದಿಗ್ಧತೆಗಳಲ್ಲಿ 'ತನ್ನತನ' ವನ್ನು ಸ್ಥಾಪಿಸುವ ವಾಂಛೆಯುಳ್ಳದ್ದು. 'ಸಿಕಾಡ', 'ಪ್ಯಾಂಜಿಯಾ' ಮತ್ತು 'ಕದವಿಲ್ಲದ ಊರಲ್ಲಿ' ಮೂಲಕ ಸ್ಪಷ್ಟವಾಗಿ ಗುರುತಿಸಬಹುದಾದದ್ದು ಈ ಹಂಬಲವನ್ನೇ ವಸ್ತುವನ್ನು, ವಿಷಯ ಸಂದರ್ಭವನ್ನು ಕಾವ್ಯ ಪ್ರಕ್ರಿಯೆಯೊಳಗೆ ಬರಮಾಡಿಕೊಳ್ಳುವ ಈ ನಿಷ್ಠೆಗೆ ಅಭಿವ್ಯಕ್ತೀಕರಣದ ಬಗ್ಗೆ ಅಸಮಾಧಾನ ಮತ್ತು ತೀವ್ರತೆ ಎರಡೂ ಇದೆ

'ಪದಮಾತ್ರದ ಕಣವಾಗುಳಿದ ವಿಷಾದದೊಟ್ಟಿಗೆ
ದಾಂಪತ್ಯ ನಡೆಸುವಾಗ'.

ಜಿ.ಕೆ. ರವೀಂದ್ರಕುಮಾರರ ಸ್ವಂತಿಕೆಯ ದಾರಿಯನ್ನು ಹುಡುಕ ಹೊರಟಾಗಿನ ಈ ನಿರಂತರತೆಗೆ ಮುಕ್ತಾಯವೇ ಇಲ್ಲ. ಇಲ್ಲಿನ ಬಹುತೇಕ ಪದ್ಯಗಳಲ್ಲಿ, 'ನಿಲುಗಡೆ'ಯೊಂದನ್ನು ಅರಸುತ್ತ ಹೊರಟು, ಇಷ್ಟವಿರದಂತೆ 'ಮುಗಿಸುವ' ಮಾತುಗಳಾಗಿ ಬಿಡುತ್ತವೆ. ಬೊಗಸೆಗಟ್ಟಲೆ ವಿಚಾರಗಳನ್ನು, ಮೊಗೆ ಮೊಗೆದು ಕೊಡುವ ಇವರ ಕವಿತೆಗಳ ಜಾಡು ಶೋಧನೋನ್ಮುಖ ವಾದದ್ದು. ಈ ಸ್ವಭಾವ ಜೀವನ್ಮುಖ ಪಯಣದ ಅಗಮ್ಯ ಹುಡುಕಾಟವೇ ಸರಿ.

'ಕೌತುಕದ ಜಗದೊಳಗೆ ಹುಟ್ಟಿ ಬರುವುದೇ ಕೌತುಕ
ಅದು ಬಿಟ್ಟು ಇದು ಬಿಟ್ಟು ಇದು ಬಿಟ್ಟು ಅದು ಬಿಟ್ಟು,

'ಪ್ಯಾಂಜಿಯಾ'ದ ಒಟ್ಟು ಅನುಭವ ದ್ರವ್ಯವೇ ಚಿಂತನೆಯ ಮೂಲದ್ದು. ಈ ಚಿಂತನೆ ಕೂಡಾ ತತ್ವ ಮತ್ತು ತರ್ಕಗಳ ಹೆಗಲಮೇಲೆ ಹೊತ್ತು ಸಾಗುವಂಥದ್ದು. ಈ ಚಿಂತನಾಕ್ರಮದಲ್ಲಿ ಕಟ್ಟುವ ಮಾತುಗಳು ನೆಲಮುಗಿಲುಗಳ ಮಧ್ಯೆ ಅವಿರ್ಭಾವಗೊಂಡ 'ಅನುಭಾವ'ದ ಸ್ಪರ್ಶ ಪಡೆದು ಬಿಡುತ್ತವೆ. ತರ್ಕ ಮತ್ತು ತತ್ವಗಳ ಸ್ಪರ್ಶ ಪಡೆದುಕೊಂಡ ಜೀವನಾಮಭವಗಳು ಕಾವ್ಯ ಶರೀರದಲ್ಲಿ ಪಕ್ವತೆ ಪಡೆದುಬಿಡುತ್ತವೆ.

'ಕಾಣಿಸುವ ನಕ್ಷತ್ರ ಇರಬೇಕೆಂದಿಲ್ಲ
ಉರಿದು ಹೋದವೂ ಕೆಲವೊಮ್ಮೆ ಕಾಣುತ್ತವೆ'

'ಪ್ಯಾಂಜಿಯಾ'ದ ಮೂಲಕ ದಕ್ಕುವ ಬಹುತೇಕ ಪದ್ಯಗಳ ಮಾದರಿ ಇದೇ ಆಗಿದೆ. ತತ್ವ ಮತ್ತು ತರ್ಕಗಳ ಮಧ್ಯೆ ಸಿದ್ಧಿಸುವ 'ಅರಿವು' ಕುತೂಹಲದ ಬಗೆಯನ್ನು ವಿಸ್ತರಿಸುತ್ತದೆ. ಕೌತುಕ ವಿರದ ಬದುಕಿನಲ್ಲಿ ಅಥವಾ ಬದುಕಿನ ಬಗ್ಗೆ ಕೌತುಕವಿರದೇ ಸೃಜನಶೀಲತೆ ಉಸಿರಾಡುವುದು ಸಾಧ್ಯವೇ ಇಲ್ಲ ಎಂಬುದು ಕವಿಯ ನಂಬುಗೆ ಎಂಬುದು ಈ ಮೂಲಕ ಸಾಬೀತುಗೊಳ್ಳುತ್ತದೆ.

'ಸೀಳಿದ ಹಿಡಿಗಳೆಲ್ಲ
ಸಿಡಿದಾದ ಮೇಲೆ ಇಡಿಯಂತೆ
ಭ್ರಮೆ ಹುಟ್ಟಿಸಲು
ಪ್ಯಾಂಜಿಯಾದ ದುಡಿಗೆಷ್ಟು ಗಡಿ?'

ಯಾವುದೇ ಚಳುವಳಿ, ಯಾವುದೇ ಸಾಂದರ್ಭಿಕ ತುರ್ತುಗಳನ್ನು ಗುರುತಿಸಿಕೊಡದ ಈ ಹೊತ್ತಿನ ಕಾವ್ಯ ಪ್ರಕ್ರಿಯೆ ಜಿ.ಕೆ. ರವೀಂದ್ರರ ಮೇಲೂ ಪ್ರಭಾವ ಬೀರಿರುವಂತಿದೆ. ಅಪಾರವಾದ ಪ್ರೇರಣೆಗಳಿಗೆ ಎದೆಯೊಡ್ಡಿನಿಂತ, ಹೊರಗಿನ ಜೀವನ ಮತ್ತು ತನ್ನೊಳಗೆ ತಾನೇ ಸಾಧಿಸಬಹುದಾದ ಕಾವ್ಯ ಮಾರ್ಗ ಎರಡರ ಸಂಘರ್ಷ ಇಲ್ಲಿ ಇದೆ. ಜೊತೆಗೆ ಕಾವ್ಯವು ಕೇವಲ ಅಭಿಪ್ರೇರಣೆಗೆ ಒಳಗಾಗಿ ಮೂಡಬಹುದಾದ ಅಭಿವ್ಯಕ್ತಿಯಾಗದೇ ಅದು ಧ್ಯಾನಸ್ಥ ಮನಸ್ಸೊಂದರ ಆಂತರಿಕ ವಲಯದ ಚಿಂತನಾಕ್ರಮವಾಗಿ ಬಿಡುತ್ತದೆ. ಈ ನೆಲೆಯಲ್ಲಿ ನಡೆಸುವ ಅನುಸಂಧಾನದಲ್ಲಿ ಸಂಯೋಜನೆಗೊಂಡ ಕವಿತೆ ಕೇವಲ ಪ್ರತೀಕ, ಪ್ರತಿಮೆಗಳ ಶ್ಲೇಷೆಯಲ್ಲಿ ಉಸಿರುಗಟ್ಟದೇ ಜೀವನಸಹಜವಾದ ಉಸಿರಿನ ಹಾಡಾಗುತ್ತದೆ.

ಆದಿ ಜಾಡಲಿ ನಿಂತವರ ಕಣ್ಣು ಹೊಳೆವ ಬಿಂದು
ಅಂತ್ಯ ಚಿತ್ತದಲಿ ಅತ್ತವರ ಕಣ್ಣು ಶೂನ್ಯ ಬಿಂದು'

ಈ ತರಹದ ಅಭಿವ್ಯಕ್ತಿಗಳಲ್ಲಿ ಕವಿಯ ಪದ ಪ್ರಯೋಗಗಳು ಎಲ್ಲಿಂದಲೋ ಹಿಡಿದು ತಂದ ಪದ ಸಮೂಹಗಳಾಗಿರದೇ, ತನ್ನಿಂದ ತಾನೇ ಹರಿದು ಬಂದ ಸಹಜ ಧನಿ ಆಗುತ್ತದೆ. ಕೆಲವೊಮ್ಮೆ ಪದಗಳ ಧಾರಾಳ ಪ್ರಯೋಗದಲ್ಲಿ 'ವಸ್ತು'ವನ್ನು ನುಣುಚುವಂತೆ ಮಾಡಿದರೂ ಕೂಡಾ, ಕೆಲವು ಕವಿತೆಗಳ ಗೆಲವು ಪದಮಾರ್ದವತೆಗಳಲ್ಲಿ ಅಡಗಿದೆ ಎನ್ನಿಸುತ್ತದೆ.

ಉದಾ: 'ದಿನಕೆ ಹೆಗಲುಗಳಿಲ್ಲ', 'ಸಾವೇ ಸಾಲಾಗುವ ಮೊದಲು', 'ಭವ ಸಂಭವ' ಇತ್ಯಾದಿ ಆದರೆ 'ಪ್ಯಾಂಜಿಯಾ'ದ ಬಹುತೇಕ ಪದ್ಯಗಳಲ್ಲಿ ಬದುಕಿನ ಕುರಿತ ಜಿಜ್ಞಾಸೆ ಮತ್ತು ಅದರಾಳದಲಿ ವಿಷಾದವೊಂದು ತಣ್ಣಗೆ ಹರಿದಂತೆ ತೋರುತ್ತದೆ. ಬದುಕಿನ ಸಹಜ ಸ್ಥಿತಿಗಳನ್ನು ಯಥಾವತ್ತಾಗಿ ಗ್ರಹಿಸುವ ಮನಸ್ಸು ತೀರಾ ತಾತ್ವಿಕ ನೆಲೆಯಲ್ಲಿಯೇ ವ್ಯಾಖ್ಯಾನಿಸಹೊರಟಾಗ, ತತ್ವದಾಚೆಯ ಅನುಭಾವ ಅಥವಾ ಹಾಗೆಂಬ ಅತೀತತೆ ತೀರಾ ಕಾಡುತ್ತದೆ. ಬಹುಶ: ವಿಷಾದದ ಅಂಚಿನಲ್ಲಿ ಕಾದು ಕೂತ ಸಾಂತ್ವನ ಇದೇ ಆಗಿದೆ.

'ಬದುಕ ಧ್ಯಾನಿಸುವವರು
ಬದುಕಲ್ಲೂ ಸಾಯಬಹುದು
ಧ್ಯಾನಿಸದೇ ಇರುವವರು
ಹೀಗೇ ಆಗಬಹುದು'

ಹಾಗಾದಾಗ ಕೆಲವೊಮ್ಮೆ ಕಾವ್ಯದ ಮಾತು ತತ್ವದ ಭಾರದಿಂದ ತೀರಾ ಗಂಭೀರವಾಗುತ್ತದೆ.

'ಮೂಲಗಾಣದ ಮೂಲಕ್ಕೆ ಒಡಲೆಂಬ ಅಂತ್ಯ ಮೂಲ
ಮೂಲ ಕಾಣುವ ಮೂಲಕ್ಕೆ ಬಿಂದು ಬಿಂದುವಿನಲ್ಲೂ ಒಡಲು'

ಈ ಇಂಥ ಕ್ರಮದ ಜಿಜ್ಞಾಸೆ ತತ್ವ ಮತ್ತು ತರ್ಕಗಳ ಮಧ್ಯೆ ಸತ್ಯಾಸತ್ಯತೆಗಳನ್ನು ಅರಸಲು ಹೊರಟು ಸತ್ಯವೇ ಸುಳ್ಳಾಗಿ, ಸುಳ್ಳೇ ಸತ್ಯವಾಗಿ ಭ್ರಾಂತಿ ಹಿಡಿಸುವುದೂ ಉಂಟು!

'ತಿರುಗುವ ನೆಲದ ಮೇಲೆ ತಿರುಗದ ಭ್ರಾಂತಿಯಲಿರಲು
ಯಾವುದು ಆಭಾಸ?'

ಜಿ. ಕೆ. ರವೀಂದ್ರಕುಮಾರರ ಸತ್ಯ-ಭ್ರಮೆಗಳ ಕುರಿತ 'ಜಿಜ್ಞಾಸೆ', ತೀವ್ರತೆಯನ್ನು ಪಡೆದುಕೊಂಡಾಗ ಮನುಷ್ಯ ಸಂಬಂಧ, ನಂಬುಗೆ, ಜೀವನದ ಅರ್ಥವತ್ತತೆಗಳನ್ನು ತುಂಬಾ ಅನುಮಾನದಿಂದ ನೋಡಲು ಶುರುಮಾಡುತ್ತದೆ. ಅತಿಯಾದ ತರ್ಕ ಉಂಟುಮಾಡುವ ಅಪಾಯವೂ ಇದೇ.

'ಹಾವೇನು ಹಗ್ಗವೇನು
ಕಂಡವರ ಕಣ್ಣಲ್ಲಿ ನಮ್ಮ ಬಿಂಬವೇ ತಲೆಕೆಳಗು

ಆದರೆ ಪ್ರತಿಯೊಂದು ಕವಿತೆಗಳಲಿ ಮುಂದುವರಿದ ಚಿಂತನೆಯ ಪೃಥಕ್ಕೀಕರಣ ಕಾವ್ಯ ಕ್ರಿಯೆಯನ್ನು ಗಟ್ಟಿಗೊಳಿಸುತ್ತಾ ಹೋಗುತ್ತದೆ.

* * *

ಚಿಂತನಾ ಪ್ರಕ್ರಿಯೆಗೆ ಇಲ್ಲಿ ಕವಿಗೆ ಪ್ರಮುಖ ಮಾಧ್ಯಮ ಕವಿತೆ. ಹಾಗಾಗಿ ಕವಿಯಾಗಿ ಅವರು ಶಬ್ದಗಳ ಚಕಮಕಿಯಲ್ಲಿ ಹೊಳೆಯಿಸುವ ಬೆಳಕು ತೆರೆದಿಡುವ ಮುಖ ತುಂಬಾ ಗಹನವಾದದು. 'ಸಾವೇ ಸಾಲಾಗುವ ಮೊದಲು', 'ಜಗದ ತುಂಬಾ ತಾತ್ವಿಕರು', 'ಎಷ್ಟು ಸೂಕ್ಷ್ಮವೀ ಗಾಳಿ', 'ಪ್ಯಾಂಜಿಯಾ', 'ಕಾಲಮಂಡಲದ ಕುಂಡಲಿಯ' ಅನುಭವಗಳು ಈ ತೆರ. ಇವೆಲ್ಲಾ ಕವಿಯ ವೈಚಾರಿಕ ಪ್ರಣಾಳಿಕೆಯಂತೆ ಸ್ಪಷ್ಟವಾಗಿದೆ. ಕಾವ್ಯದ ತಾತ್ವಿಕ ಭೂಮಿಕೆ ಮತ್ತು ಪದಗಳ ತಾರ್ಕಿಕ ಪ್ರಯೋಗ ಈ ಎರಡೂ ಕಾರಣಗಳು ಜಿ. ಕೆ. ರವೀಂದ್ರಕುಮಾರರ ಅನನ್ಯತೆಗೆ ಪುಷ್ಟಿ ನೀಡುತ್ತವೆ. ಕೆಲವಾರು ಬಾರಿ ಕಾವ್ಯದ ಅರ್ಥಸ್ಫೋಟಕತ್ವವು ವಿಶೇಷವಾಗುವುದೂ ಇದೇ ಕಾರಣದಿಂದ.

ಕಣ್ಣಿಟ್ಟ ಮನೆಯ ಕದನವೂ ಆಟ
ಕನಸಿಟ್ಟ ಮನೆಯ ಕಾರ್ಪಣ್ಯವೂ ಊಟ'

ಹೀಗೆ ಜಿ. ಕೆ. ರವೀಂದ್ರಕುಮಾರರ ಕಾವ್ಯಗ್ರಹಿಕೆ-ಜೀವನಗ್ರಹಿಕೆಯ ಜೊತೆ ಹೆಗಲು ನೀಡಿದಾಗ ಕಾವ್ಯದ ಆಳವಿಸ್ತಾರ ಸಾಧ್ಯವಾಗುತ್ತದೆ. ಕೆಲವು ಪದ್ಯಗಳಲ್ಲಿನ ಶಬ್ದ ವಿಪುಲತೆಗೆ, ಅನಾವಶ್ಯಕ ಪದಪ್ರಯೋಗಗಳಿಗೆ ಅತಿಯಾದ ತಾರ್ಕಿಕ ಮನೋಭಾವವೇ ಕಾರಣ ಎಂಬ ಅರಿವೂ ಉಂಟಾಗುತ್ತದೆ. ಉದಾ: 'ಕಾರ್ಯದ ಉರಿ, ಹೆಸರಿನ ಉರಿ, ಸಂಬಂಧದ ಉರಿ, ಮೂಸಿದರೆ ಉರಿ....' 'ಯಾರ ಮೂಳೆ ಯಾರ ಮನಸಲಿ ಕೊಳೆ' 'ಕೊಂಡಿಯನು ಹಿಂಡಿದರೂ, ಜಯಜಯವಂತಿ, ಸರಪಳಿ ಸಾವೇ-ರಿ.....' ಇತ್ಯಾದಿ.

ಅಭಿವ್ಯಕ್ತೀಕರಣದ ತೀವ್ರತೆಯ ಅಪಾಯವೇ ಇದು. ಕೊನೆಗೆ ಕವಿತೆಯ ಇಬ್ಬಂದಿತನ ಮತ್ತು ಪರಿಕಲ್ಪನೆಗಳ ಗೊಂದಲಗಳು ಮೂಡುತ್ತವೆ. ಬೆಳೆಯುತ್ತ ಬೆಳೆಯುತ್ತ ಹೋಗುವ ಕವಿತೆ ಓದಿಸಿಕೊಂಡ ಮೇಲೆಯೂ ಏನೂ ಉಳಿಸಿಕೊಡದ ಹಾಗೆ (ಸರಪಳಿ). ಕೆಲವೊಮ್ಮೆ 'ಅಂತೆ' ಎಂಬ ಉಪಮೆಗಳು ಇರಿಸು-ಮುರಿಸು ಉಂಟು ಮಾಡುತ್ತದೆ. (ಬಿದ್ದ ಚಕ್ಕುಲಿ ತುಣುಕು)



'ಮಾತೆಂಬುದು ನಿರುದ್ಯೋಗಿಯಾಗಿ
ಮೌನದ ತಮ್ಮಟೆಯ ಹಿಂದೆ' -

ಕಾವ್ಯದ ಮಿತಿ ಮತ್ತು ಸಾಧ್ಯತೆಗಳೆರಡರ ಬಗ್ಗೆ ಕಾಳಜಿ ಮತ್ತು ಎಚ್ಚರಿಕೆಯಿರುವ ರವೀಂದ್ರಕುಮಾರರ ಕಾವ್ಯಕೆ ಮುಗಿವಿಲ್ಲ. 'ಸಿಕಾಡ', 'ಪ್ಯಾಂಜಿಯಾ', 'ಕದವಿಲ್ಲದ ಊರಲ್ಲಿ' ಮೂರು ಕವಿತೆ-ಕವಿತೆಗಳ ಮಧ್ಯೆ ಹರಿವ ನಿರಂತರ ಚಿಂತನೆ-ತರ್ಕ-ಅನುಭಾವಗಳು ನೆಲಮುಗಿಲಿನ ಪ್ರಜ್ಞೆಯನ್ನು ಉಳಿಸಿಕೊಂಡಿವೆ. ಸೃಜನಶೀಲತೆಯ ಕಾವ್ಯ ಮಾರ್ಗ ಅದು ಆತ್ಮ ಜಿಜ್ಞಾಸೆಯ ಬಟ್ಟಲದ ಪರಿಧಿಯಾಗಿ ಸಾಕಾರಗೊಳ್ಳುವ ನೆಲೆಯಲ್ಲಿಯೇ ಜಿ. ಕೆ. ರವೀಂದ್ರ ನಮ್ಮ ಮಧ್ಯೆ ಸ್ವಂತಿಕೆಯ ಗಟ್ಟಿ ಬೇರುಗಳನ್ನು ಭದ್ರಪಡಿಸಿಕೊಂಡಿದ್ದಾರೆ. ಹಾಗಾಗಿಯೇ,

'ಜಗದ ತುಂಬಾ ತಾತ್ವಿಕರೇ ತುಂಬಿರುವ
ಈ ಕಾಲ ಎಷ್ಟು ಅರ್ಥಪೂರ್ಣ' ❑



## ಕದವಿಲ್ಲದ ಊರಲ್ಲಿ ನನ್ನ ಓದು

ಸ. ಉಷಾ

1994ರಲ್ಲಿ 'ಸಿಕಾಡ' ಎಂಬ ಮೊದಲ ಕವನಸಂಕಲನ, 97ರಲ್ಲಿ ಪ್ಯಾಂಜಿಯಾ ಎಂಬ ಎರಡನೆಯ ಸಂಕಲನ, ಹೊರತಂದ ಜಿ.ಕೆ. ರವೀಂದ್ರಕುಮಾರ್ 2001ರಲ್ಲಿ 'ಕದವಿಲ್ಲದ ಊರಲ್ಲಿ ಎಂಬ ಮೂರನೇ ಕವನ ಸಂಕಲನ ಹೊರತಂದಿದ್ದಾರೆ.

'ಸಿಕಾಡ', ಪ್ಯಾಂಜಿಯಾ' ಎಂಬ ಹೆಸರುಗಳು ಸಾಮಾನ್ಯ ಓದುಗನಿಗೆ ಪರಿಚಿತವೇನಲ್ಲ. ಕವಿತೆಯ ಜೊತೆಗೇ ಇರುವ ಟಿಪ್ಪಣಿಯಲ್ಲಿ ಸಿಕಾಡ ಎಂದರೆ ಭೂಮಿಯೊಳಗೆ ಹದಿನೇಳು ವರ್ಷ ಪೊರೆಯೊಳಗೆ ಅಡಗಿದ್ದು ಭೂಮಿ ಮೇಲೆ ಬಂದ ಮೇಲೆ ಒಂದು ತಿಂಗಳು ಮಾತ್ರ ಬದುಕುವ ವಿಶಿಷ್ಟ ಸದ್ದು ಮಾಡುವ ಕೀಟ. ಪ್ಯಾಂಜಿಯಾ ಎಂದರೆ ಹಿಂದೊಮ್ಮೆ ಖಂಡಗಳು ಬೇರೆ ಬೇರೆಯಾಗಿಲ್ಲದೇ ಇದ್ದಾಗ ಇದ್ದ ಸಮಸ್ತ ಅಖಂಡ ಭೂಮಿ ಎಂಬ ವಿವರಣೆಗಳಿವೆ. ''ಕದವಿಲ್ಲದ ಊರಲ್ಲಿ'' ಎಂಬ ಹೆಸರಿಗೆ ಹಾಗೆ ವಿವರಣೆಯ ಅಗತ್ಯವಿಲ್ಲ. ಕದ-ಊರು ಎಲ್ಲರಿಗೂ ಅರ್ಥವಾಗುವಂಥ ಪದಗಳೇ, ಆದರೆ ಪ್ಯಾಂಜಿಯಾದ ಕನಸು ಸಿಕಾಡದ ಗುಂಜಾರವ ಕದವಿಲ್ಲದ ಊರಲ್ಲಿ ಇದ್ದೇ ಇದೆ.

ರವೀಂದ್ರ ಕುಮಾರ್ ಕವಿತೆಯಲ್ಲಿ ಯಾವಾಗಲೂ ಒಂದು ಇಡಿಯಾದ ನಾಡಿನ ಕನಸು ಇದೆ. ಅಲ್ಲಿ ಗಡಿರೇಖೆಗಳಿಲ್ಲ. ಅದು ಭೂಮಿಯೊಳಗೆ ಹದಿನೇಳುವರ್ಷ ಅಡಗಿದ್ದು ಒಂದು ತಿಂಗಳು ಮಾತ್ರ ಮೇಲೆ ಬದುಕಿರುವ ಸಿಕಾಡನ ಕನಸು. ಅದು ಎಲ್ಲ ಖಂಡಗಳೂ ಸೇರಿಕೊಂಡಿದ್ದ ಆದಿ ಅಖಂಡ ಪ್ಯಾಂಜಿಯಾದ ಕನಸು. ಅದು ಕದವಿಲ್ಲದ ಊರು. ಪ್ಯಾಂಜಿಯಾದಲ್ಲಿ ಗುಯ್‌ಗುಟ್ಟಿದ ಸಿಕಾಡವೇ ಕದವಿಲ್ಲದ ಊರಲ್ಲೂ ಜ್ಯೊಗುಡುತ್ತಾ ಇದೆ.

ಕದವಿಲ್ಲದ ಊರಲ್ಲಿ ಬದುಕನ್ನು ಇಡಿಯಾಗಿ ಹಿಡಿಯುವುದೇ ಒಂದು ಬೆರಗು. ಆ ಇಡಿಯಾದ ಬದುಕನ್ನು ವಿಭಜಿಸಲು ಅನೇಕ ಗೆರೆಗಳಿವೆ ಅಳತೆಗೋಲುಗಳಿವೆ. ಮನುಷ್ಯನಲ್ಲಿ ಇರುವ ಅನೇಕ ವೈರುಧ್ಯಗಳಲ್ಲಿ ಒಂದು ಎಲ್ಲವನ್ನೂ ಅಳೆದು ವಿಭಜಿಸಿ ಅಧ್ಯಯನ ಮಾಡಲು ಹೊರಡುವುದು ಹಾಗೆ ವಿಭಜಿಸುತ್ತಲೇ ಅಖಂಡದ ಕನಸು ಕಾಣುವುದು. ಗಡಿರೇಖೆಗಳನ್ನು ಪ್ರತಿಕ್ಷಣವೂ ಎಳೆಯುತ್ತ ಗಡಿರೇಖೆಗಳು ಅಳಿಯುವ ಕನಸು ಕಾಣುವುದು. ಹಾಗೆ ಮನುಷ್ಯ ತಿಂಗಳೊಪ್ಪತ್ತಿನಲ್ಲಿ ಬದುಕಿನ ನಾದ ಹಿಡಿಯಲು ಯತ್ನಿಸುತ್ತಾ ಝೇಂಕರಿಸಿ ಮತ್ತೆ ಅನಂತಕ್ಕೆ ಸಲ್ಲುವ ಸಿಕಾಡ. ದೇಹ ಸೀಳಿದಾಗಲೂ ಉಳಿದ ದಿವ್ಯದ ಭಾಷೆಗೆ ಸಾಕ್ಷಿಯಾದ ಪ್ಯಾಂಜಿಯಾ.

ಕಾಲದ ಅನಂತತೆಯಲ್ಲಿ ಎಲ್ಲ ಅಳತೆಗೋಲುಗಳು ನಾಶವಾಗುತ್ತವೆ. ಹಾಗೆ ಎಲ್ಲ ಅಳತೆಗೋಲುಗಳು ನಾಶವಾಗುವಾಗಲೂ ಜೀವ ಬದುಕಿನ ಕಡೆಗೆ ತುಡಿಯುತ್ತಿರುತ್ತದೆ.

''ಮುಳುಗಿ ತಕ್ಕಡಿ ದಿಕ್ಕುತಪ್ಪಿ ಇಂಚುಪಟ್ಟಿ
ಅಳೆವ ಕೈಕಾಲು ಹಪಹಪಿಸಿ ಬಡಿದಿರಲು
ತೇಲಿ ಹುಲ್ಲುಕಡ್ಡಿ
ಎಷ್ಟು ದೊಡ್ಡದು ಈ ಉಸಿರ ಮುರಲಿ. (ಬೆಳೆವ ಬೆರಗಿನಲಿ, ಪುಟ-4)

ಬದುಕು ಎಂಬ ಬೆರಗಿನಲ್ಲಿ ಹಲವು ತಲ್ಲಣಗಳಿವೆ. ಹಲವು ಸಂಕಟಗಳಿವೆ. ಕದವಿಲ್ಲದ ಊರಲ್ಲಿ ಎಂಬ ಕಲ್ಪನೆಯೇ ಅನಂತತೆಯನ್ನು ಕನಸುವಂಥದು.

ಕಾಲದ ಅನಂತ ವಿಸ್ತಾರ ಮತ್ತು ಜೀವದ ಮಿತಿಗಳ ಮುಖಾಮುಖಿ ಇಲ್ಲಿನ ಮುಖ್ಯ ತಲ್ಲಣಗಳಲ್ಲಿ ಒಂದು. ಇಲ್ಲಿ ಲೋಕ ಲೋಲಕದ ಜಾಡಿ ಇದೆ. ''ನೆಲೆ ತಪ್ಪಿದ ಲೋಲಕ'' ಇದೆ. ''ನಿಂತ ಲೋಲಕದ ಮೌನ''ವಿದೆ. ಇವೆಲ್ಲದರ ಜೊತೆಗೆ ''ಪುರಸೊತ್ತಿಲ್ಲದ ಜೀವಗಿಣಿ'' ''ಕಂಗೆಟ್ಟ ಜೀವಗಿಣಿ''ಗಳೂ ಇದರಲ್ಲಿವೆ.

ಮಾನವ ಜೀವ ಒಂದು ಕೈಯಲ್ಲಿ ಸೂಜಿ, ಇನ್ನೊಂದರಲ್ಲಿ ದಾರ ಹಿಡಿದುಕೊಂಡು ದಿನವನ್ನು ಹೊಲಿಯುವ ಚಿತ್ರ, ಕಾಲವನ್ನು ಅಳೆಯ ಬಯಸುವ ತನ್ನ ತೆಕ್ಕೆಯಲ್ಲಿ ಹಿಡಿಯ ಬಯಸುವ ಮಾನವನ ಚಿತ್ರವೇ ಆಗಿದೆ.

ಛಂದಸ್ಸಿನ ದೃಷ್ಟಿಯಿಂದ ರವೀಂದ್ರ ಕುಮಾರ್ ಕೆಲವು ಕುತೂಹಲಕರ ಪ್ರಯೋಗಗಳನ್ನು ಮಾಡಿದ್ದಾರೆ. ನವ್ಯ ಕವಿತೆ ಕನ್ನಡ ಕಾವ್ಯಕ್ಕೆ ಕೊಟ್ಟ ಬಿಗಿಬಂಧದ ಪ್ರಭಾವ ಇನ್ನು ಕನ್ನಡದ ಕವಿತೆಯ ಮೇಲೆ ಗಟ್ಟಿಯಾಗಿ ಉಳಿದಿದೆ. ಹಾಗಾಗಿ ಕೆಲವೊಮ್ಮೆ ಇವತ್ತಿನ ಕವಿತೆ ತನ್ನ ರೂಪವನ್ನು ಇನ್ನೂ ಸೃಷ್ಟಿಸಿಕೊಂಡಿಲ್ಲ ಎಂಬ ಮಾತು ಕೇಳಿಬರುತ್ತದೆ. ಆ ಪ್ರಭಾವವನ್ನು

ಒಡೆದು ಹಾಕುವ ಪ್ರಯತ್ನದಲ್ಲಿ ಕನ್ನಡ ಕವಿತೆ ಗೇಯವಾಯಿತು. ನವೋದಯ ಕಾಲದ ಭಾವಗೀತೆಯ ರೂಪಕ್ಕೆ ಒಲಿಯಿತು. ಇನ್ನೊಂದು ದಿಕ್ಕಿನಲ್ಲಿ ಚದುರಿದ ಚಿತ್ರಗಳಂಥ ರವೀಂದ್ರ ಕುಮಾರ್ ಕವಿತೆ ಒಂದು ಶಬ್ದದ ಕೊಲಾಜ್ ಚಿತ್ರದ ಹಾಗೆ ಕಂಡು ಬರುತ್ತದೆ. 'ಕಣಿವೆಯ ಪದ್ಯ'ಗಳಲ್ಲಿ ಈ ಶಬ್ದಗಳ ಕೋಲಾಜ್ ಶೈಲಿಯನ್ನು ನೋಡಬಹುದು.

ಇದ್ದಕಿದ್ದಂತೆ ಸಿಡಿದು ಬಿಡುತ್ತವೆ
ಎದೆಯ ಕವಾಟಗಳು
ದಿನ ದಕ್ಕದ ದಿನಸಿ
ಎಲ್ಲೆಲ್ಲೂ ಹರಡಿ ಚೆಲ್ಲಾಪಿಲ್ಲಿ
ಬೂಟಿಗಂಟಿ ಕಾಲಿಗಂಟಿ ಕೊಕ್ಕಿಗಂಟಿ
ದಿನವು ಬೆಂದಾಗ
ದಿನಸಿ ಬೇಯುವುದಿಲ್ಲ,

ಹೀಗೆ ಬದುಕು ಚೆಲ್ಲಾಪಿಲ್ಲಿಯಾಗುವ ಭೀಕರತೆಯಲ್ಲೂ ''ಅವರು ಬದುಕುತ್ತಾರೆ'' ಎಂಬ ಮೊದಲ ಪದ್ಯದ ಶೀರ್ಷಿಕೆ ಕವಿಯ ಆಶಯವನ್ನು ಸೂಚಿಸುತ್ತದೆ.

'ಹಾಕಿ-ಹಾಕಿ' ಈಗಾಗಲೇ ಕವಿತೆಗೆ ದಕ್ಕಿರುವ ರೂಪ ಬಂಧಗಳಲ್ಲಿ ಅಚ್ಚುಕಟ್ಟಾಗಿ ಬೆಳೆದಿದೆ ಆಟದ ಬಗೆಗಿನ ಹಗುರ ಮಾತಿನಲ್ಲೇ ಧ್ಯಾನಚಂದನನ್ನು ನೆನೆಯುತ್ತಾ ಕೊನೆ ಕೊನೆಗೆ ಚಿಂತನಕ್ಕೆ ಮಾಗಿ ಬದುಕನ್ನು ಒಂದು ಆಟವಾಗಿ ನೋಡುತ್ತದೆ.

ವೇಳೆಯಿರುವವರೆಗೆ ಪೆನಾಲ್ಟಿ
ಮುಗಿದೊಡನೆ ಸಡನ್‌ಡೆತ್
'ಆಮೇಲೆ ಯಾರ ಸೀಟಿಯೋ'

- ಎಂಬಲ್ಲಿ ಒಂದು ಕಾಣ್ಕೆಯಿದೆ.

ಛಂದಸ್ಸಿನ ದೃಷ್ಟಿಯಿಂದ ರವೀಂದ್ರ ಕುಮಾರ್ ಕೆಲವು ಕುತೂಹಲಕರ ಪ್ರಯೋಗಗಳನು ಮಾಡಿದ್ದಾರೆ. ''ಬೀಜ ವೃತ್ತಾಂತವು'' ಅಂಥ ಒಂದು ಪ್ರಯೋಗ ಮತ್ತು ಈ ಸಂಕಲನದ ಮಹತ್ವದ ಕವಿತೆಯೂ ಹೌದು. ಈ ಛಂದಸ್ಸು 'ಸಿಕಾಡ'ದಲ್ಲಿ ''ತೊಗಲು ತೊಗಡೆಯಾಗುವ ಕನಸು ಪದ್ಯದಲ್ಲಿ ಬಳಸಿದ್ದೇ ಆಗಿದೆ. ಮೂರು ಸಾಲುಗಳ ಈ ಕವಿತೆ ತ್ರಿಪದಿಯಲ್ಲಿ ಷಟ್ಪದಿಯನ್ನು ಸೀಳಿ ಎರಡು ಭಾಗ ಮಾಡಿದಂತಿದೆ. ಒಂದು ಇಡಿಯಾದ ನಾಡಿಗೆ ಒದಗಿದ ದುರ್ಭಿಕ್ಷ, ಅನಾವೃಷ್ಟಿ ಬಡತನ, ಅನ್ಯಾಕ್ರಮಣ, ಕಂಡೂ ಕಾಣದ ಶೋಷಣೆ ಸ್ವಂತಿಕೆಯ ನಾಶದ ಕತೆ ಇದರಲ್ಲಿದೆ. ಇದು 'ತೊತ್ತೊಡಲ ತಲ್ಲಣ ಬೀಜಗಟ್ಟಿದ ಕಥೆ'.

ಇಲ್ಲಿ ಅನೇಕ ಒಡೆಯರು-ಒಂದು ಒಲೆ ಒಂದು ಮನೆ ಒಂದಿಷ್ಟು ಮಕ್ಕಳ ಒಡಲ ಹೊರೆಯುವ ತಲ್ಲಣದ ತಾಯಿ ಇದ್ದಾರೆ.

''ನೆಳಲ ಕೇಳುವೆಯಲ್ಲ ಎಲ್ಲಿಂದ ತರಲಿ
ನನ್ನ ಒಡೆಯರ ನೆತ್ತಿ ಇನ್ನೂ ಆರುತಲಿಲ್ಲ

ಅಲ್ಲಿ ತುಂಬಿದ ಮೇಲೆ
ಇಲ್ಲಿ ತುಳುಕುವ ಭಾಗ್ಯ''

- ಎಂಬ ಅನಿವಾರ್ಯತೆಯಿದೆ.

''ಬಾಕಿಲಿಗೆ ಬಂದವರು ಒಲೆಯ ಹೂಡುವ ಮೊದಲು
ನಿನ್ನ ಗಡಿಗೆಗೆ ನಿನ್ನ ಎಸರಿರಲಿ''

- ಎಂಬ ಎಚ್ಚರವಿದೆ.

ಆದರೆ ''ಬಂದವರ ದಿವಿನಲ್ಲಿ ಮನೆ ಮಾಡು ನಡುಗು''ತ್ತದೆ 'ಊರೆಂಬ ಊರಿಗೆ ಮಾತಿಲ್ಲ' ಗುಲಾಮಗಿರಿಗಳ ಭಾರದಲ್ಲಿ ಸೃಷ್ಟಿಶೀಲತೆ ನಾಶವಾಗುತ್ತದೆ. ''ಬೀಜವುಳ್ಳವರೆಲ್ಲ ಯಾವ ಕುಂಟೆಯ ಕೆಳಗೋ'' ದುಡಿಯುತ್ತಿದ್ದಾರೆ. ಆದರೆ ''ಬೆರಣಿಯಲ್ಲಿ ಅರಗದ ಬೀಜ'' ಅವಿತುಕೊಂಡಿದೆ. ಸ್ವಾತಂತ್ರ್ಯದ ಬದುಕಿನ ಸಾಧ್ಯತೆಗಳಿನ್ನೂ ಸಂಪೂರ್ಣವಾಗಿ ನಾಶವಾಗಿಲ್ಲ.

'ಯಾವ' ಹಕ್ಕಿಗಳು ತನ್ನ ಪೂರ್ವಿಕರ ದಾರಿಯನ್ನು ಕ್ರಮಿಸುವ ಯಾನದ ಜೊತೆಗೆ ಮನುಷ್ಯನೆಂಬ ಪುಟ್ಟ ಹಕ್ಕಿ ಚರಿತ್ರೆಯ ವೈಶಾಲ್ಯ ಭವಿತವ್ಯದ ಬದುಕುಗಳ ಆಗಸವನ್ನಳೆಯುವ ಸಂಬಂಧವನ್ನೂ ತಟ್ಟಿದೆ.

''ಅಲೆವ ಅಶ್ವಕ್ಕೆ
ಮಾಧವಿಯ ಸೀರೆ ಜಾನಕಿಯ ಸೆರಗು
ದಮಯಂತಿಯ ನಿರಿಗೆ ಪಾಂಚಾಲಿಯ ಮಡಿಕೆ''

ಚಿಂತನದ ದೃಷ್ಟಿಯಿಂದ ಪ್ರಬಲವಾಗಿರುವ ರವೀಂದ್ರಕುಮಾರ್ ಕವಿತೆ ಬಂಧದ ದೃಷ್ಟಿಯಿಂದ ಅಷ್ಟೇ ಪ್ರಬಲವೆಂದು ಹೇಳಲಾಗದು. ಇವರ ಕವಿತೆಯಲ್ಲಿ ಹಲವು ಮಹತ್ವದ ಹೊಳಹುಗಳಿವೆ. ಅವು ಚೆದುರಿದ ಚಿತ್ರಗಳಂತಿವೆ. ಬಣ್ಣ ಬಣ್ಣದ ಮುತ್ತುಗಳಂತಿವೆ. ಅವನ್ನು ಕೂಡಿಸುವ ದಾರದ ಎಳೆಗಳು ಕಾಣುವಂತಿಲ್ಲ. ಅವನ್ನು ಶೋಧಿಸುತ್ತ ಕಾಡಿನಲ್ಲಿ ಜಾಡು ಹುಡುಕುತ್ತಾ ಓದುಗ ಸಾಗಬೇಕಾಗುತ್ತದೆ.





# ಅರ್ಧ ತೆರೆದ ಬಾಗಿಲು;
# ತೆರೆದಿಟ್ಟ ಸತ್ಯ



ಜಿ.ಕೆ. ರವೀಂದ್ರಕುಮಾರ್

ಹತ್ತೊಂಭತ್ತು ನೂರಾ ಎಂಭತ್ತಾರರ ಆ ನೋವಿನ ದಿನಗಳಲ್ಲಿ ಬೆಂಗಳೂರಿನ ಆಸ್ಪತ್ರೆಯೊಂದರಲ್ಲಿ ಸತತ ಮೂರು ತಿಂಗಳು ನಾನು ನಡೆಸಿದ ಸಾವು ನೋವಿನ ಹೋರಾಟದಲ್ಲಿ ಉಳಿಯಲೂ ಬಹುದಾದ ಹಂತಕ್ಕೆ ಬಂದಾಗ ನನ್ನ ಧ್ವನಿಯೇ ಅಡಗಿತ್ತು. ಧ್ವನಿಯೇ ಬಂಡವಾಳವಾಗಿದ್ದ ನನ್ನ ವೃತ್ತಿ ಆತಂಕದಲ್ಲಿತ್ತು. ಬರೆಯುವುದೇ ಮರೆತಂತಾಗಿದ್ದ ನನಗೆ ಪೇಪರು ಪೆನ್ನು ಕೊಟ್ಟಾಗ ಚದುರಿದ ಅಕ್ಷರಗಳಲ್ಲಿ ನಡುಗುವ ಕೈಗಳಿಂದ ನಾನು ಬರೆದ ಒಂದೇ ಸಾಲು 'ನಾನು ಕವಿತೆ ಬರೆಯಬೇಕು' ಎಂದು. ಅಕ್ಕಪಕ್ಕದ ಹಾಸಿಗೆಗಳಲ್ಲಿ ಸುಮಾರು ಮೂವತ್ತು ಸಾವು ಕಂಡವನಿಗೆ ಬಾಳುವ ಭರವಸೆಯೇ ಇಲ್ಲದಿದ್ದಾಗ ಹೀಗೆ ಬರೆಯಬೇಕು ಎಂದು ಏಕನಿಸಿತೋ. ಆವರೆಗೆ ಒಂದೆರಡೇ ಪದ್ಯ ಮತ್ತು ಒಂದಷ್ಟು ಚಿತ್ರ ಕವನಗಳನ್ನು ಬರೆದಿದ್ದ ನನಗೆ ಮತ್ತೆ ಬರೆಯಬಹುದಾದ ನಂಬಿಕೆಯೂ ಇರಲಿಲ್ಲ. 'ಕವಿತೆಯೆಂಬುದು ಸಾಲೇ, ಕವಿತೆಯೆಂಬುದು ಸಾವೇ....' ಎಂದು ಈಗ ಬರೆದಾಗಲೂ ಅದು ನನಗೆ ಬಗೆಹರಿದಿಲ್ಲ. ಇದರರ್ಥ ನನ್ನ ಕವಿತೆಯ ಹಂಬಲ ದುರಂತದಲ್ಲಿಯೇ ಹುಟ್ಟಿದ್ದು ಎಂದಲ್ಲ. ದುರಂತದ ಸಮಯದಲ್ಲಿ ಕವಿತೆ ನನ್ನ ಒತ್ತಾಸೆಯಾದುದು ಕುತೂಹಲದ ಸಂಗತಿ. ಆರ್ಥಿಕ ಮುಗ್ಗಟ್ಟು, ಸರೀಕರೆದುರು ಹಾಗೆಂದು ತೋರಿಸಿಕೊಳ್ಳಲಾಗದ ಕೆಳಮಧ್ಯಮ ವರ್ಗದ ತಲ್ಲಣ, ಅವಮಾನ, ಕೀಳರಿಮೆಗಳ ಸಾಲು, ಎಲ್ಲವೂ ಸರಿಯಾಯಿತು ಎಂದುಕೊಳ್ಳುವಲ್ಲಿ ಮತ್ತೊಂದು ಕೌಟುಂಬಿಕ ಬಿಕ್ಕಟ್ಟು, ದೂರವಾದ ಕನಸುಗಳು, ಛಿದ್ರಗೊಂಡ ಸಂಬಂಧಗಳು ಇವುಗಳ ನಡುವೆಯೇ ತೊಂಭತ್ತೆರಡರಲ್ಲಿ ನನ್ನಿಂದ ಹೊರಬೀಳಲೇಬೇಕು ಎಂದು ಕವಿತೆ ನಿರ್ಧರಿಸಿದ ರಾತ್ರಿ ನನ್ನ ಪಕ್ಕದಲ್ಲಿದ್ದವರು ನನ್ನ ಮಗು, ಪತ್ನಿ ಮತ್ತು ಭೀಮಸೇನ ಜೋಷಿಯ ಆಲಾಪನೆಯ ತರಂಗ.

ನನ್ನ ಕವಿತೆಯ ಹುಟ್ಟನ್ನು ನೆನೆದಾಗ ಇವು ಮಾತ್ರವೇ ಈಗ ಯಾಕೆ ನೆನಪಾಗುತ್ತಿವೆ? ಗೊತ್ತಿಲ್ಲ. ಇದು ಮಾನಸಿಕ ಅಂತರ ಜೋಡಣೆಯೆಂದು ಕಾಣುತ್ತದೆ. ಬದುಕಿನಲ್ಲಿ ಸಂತಸದ ಗಳಿಗೆಗಳೂ ಇದ್ದುವಲ್ಲಾ? ತಮ್ಮ ತಮ್ಮ ಮಿತಿಗಳಲ್ಲಿಯೇ ಬರವಣಿಗೆಯಲ್ಲಿ ತೊಡಗಿಕೊಂಡ ಹಿರಿಯರೂ ನಮ್ಮ ಕುಟುಂಬದಲ್ಲಿದ್ದರು. ಬಹುಶಃ ಸೃಜನಶೀಲತೆಯ ಹುಟ್ಟಿನ ನೆಲೆಯಲ್ಲಿ ನೋಡುವಾಗ ಅದರ ಮೂಲದ ಆಯುವಿಕೆ, ಸಮೀಕರಣಗಳು ಬೇರೆಯೇ ಇರುತ್ತವೆ. ನಮ್ಮದೇ ಚರಿತ್ರೆಯೂ ನಮ್ಮ ಅಧೀನವಲ್ಲ. ಈ ಹೊತ್ತಿನ ನನ್ನ ಅನಿಸಿಕೆಯೆಂದರೆ ನೋವಾಗಲಿ, ನಲಿವಾಗಲಿ ಅವು ತಮ್ಮಷ್ಟಕ್ಕೆ ಕಡಿಮೆಯೂ ಅಲ್ಲ, ಹೆಚ್ಚೂ ಅಲ್ಲ. ಅದೊಂದು

ಪರಿಪಾಕ. ದುಃಖವನ್ನು ಅದುಮಿಟ್ಟುಕೊಂಡೇ ವಿದೂಷಕನಾಗಬೇಕಿಲ್ಲ. ಲಹರಿಯ ಮನುಷ್ಯನೂ ಆಗಬಹುದು. ನನ್ನೊಳಗಿನ ಕವಿತೆಯ ಬಯಕೆ ಆಕಾರ ಪಡೆಯುವಾಗಿನ ಮೂಲ ಮತ್ತು ನಂತರದ ಕಾರಣಗಳು ಕಾಲಾಂತರದಲ್ಲಿ ಪಡೆಯುವ ವಿನ್ಯಾಸಗಳಿಗೆ ನಾನು ಹೊಣೆಯಲ್ಲ. ಮಹಾಯುದ್ಧದ ಅಂದಿನ ಕಾರಣಗಳು ಏನಿದ್ದವೋ, ಅದನ್ನು ಚರಿತ್ರೆ ಕಂಡುಕೊಂಡ ರೀತಿ ಬೇರೆಯೇ ಮಹಾಮೌನದ ಆಯಾಮಗಳೂ ಹಾಗೇ. ಕವಿತೆಯ ಮಹಾಯಾನದಲ್ಲಿ ನಿಮಿತ್ತ ನೋವೂ ದರ್ಶನದೆಡೆಗಿನ ಸೋಪಾನವಿರಬಹುದು. ಕೃಷ್ಣನ ದರ್ಶನಕ್ಕಾಗಿ ನೋವಿನ ಮೊರೆಹೋದ ಕುಂತಿ ಅದನ್ನು ಬೇಡಿ ಉಳಿಸಿಕೊಂಡಳು. ಮಗುವನ್ನು ಹೆತ್ತ ತಾಯಿಯ ನಿರುಮ್ಮಳ ಕಣ್ಣುಗಳಲ್ಲಿ ನೋವನ್ನು ಅರಸಬಹುದೇ? ಇಂಥ ನಿರುಮ್ಮಳ ಭಾವವೊಂದು ಕವಿತೆಯನ್ನು ಎಂದೂ ಕಾಪಾಡುತ್ತದೆ.

'ಜೀವನ ಜಿಗುಪ್ಸೆ ತಂದಿದೆ... ಏನೂ ಬಗೆ ಹರಿಯುತ್ತಿಲ್ಲ' ಎಂದು ಬರೆದಿದ್ದ ಯುವಕನೇ ಆಕಸ್ಮಿಕವಾಗಿ ನಿಮ್ಮ 'ಸಿಕಾಡ' ಓದಿದೆ. ಬದುಕುವ ಭರವಸೆ ಮತ್ತೆ ಹುಟ್ಟಿಸಿದೆ' ಎಂದು ಬರೆದುದನ್ನು ಓದಿದಾಗ ಮೌನವಾಗಿದ್ದೆ. ಅಕಾಲದಲ್ಲಿ ಮೃತ್ಯುವನ್ನಪ್ಪಿದ ಯಾವುದೋ ಹುಡುಗಿ ಸಾಯುವ ತಲ್ಲಣದ ದಿನಗಳಲ್ಲಿ ನನ್ನ 'ಹೇ ಸುಳ್ಳೇ ನಮ್ಮನ್ನು ಸುಳ್ಳರನ್ನಾಗಿಸಬೇಡ' ಕವಿತೆಯನ್ನು ಬರೆದಿಟ್ಟುಕೊಂಡಿದ್ದನ್ನು ಪತ್ರಿಕೆಯಲ್ಲಿ ಓದಿದಾಗ ಚಡಪಡಿಸಿದ್ದೇನೆ. ನನ್ನ ಕವಿತೆಯ ಸಾಲುಗಳನ್ನು ನೆನಪಿಸಿಕೊಳ್ಳುತ್ತ ಬೀಡಾ ಕಟ್ಟಿಕೊಟ್ಟ ಕುಮಟಾದ ಬೀಡಾ ಅಂಗಡಿ ಯವನ ಕುರಿತು ಗೆಳೆಯರೊಬ್ಬರು ಹೇಳಿದಾಗ ಅಚ್ಚರಿಪಟ್ಟಿದ್ದೇನೆ. ಕವಿತೆಯನ್ನು ಓದಿದ ಇಬ್ಬರು ಯುವತಿಯರು 'ನಮಗೆ ಗಂಡು ಹುಡುಕಿಕೊಡಿ' ಎಂದು ಬರೆದಾಗ ತಬ್ಬಿಬ್ಬು ಆಗಿದ್ದೇನೆ. ನನ್ನ ಹಾಸಿಗೆಯ ದಿನಗಳಲ್ಲಿ ನಿಮ್ಮ ಪುಸ್ತಕ ಸಮಾಧಾನ ಹೇಳಿತು ಎಂದು ಹಿರಿಯ ಜೀವವೊಂದು ಬರೆದಾಗ ದೈವಿಕದೆಡೆಗೆ ನೋಡಿದ್ದೇನೆ. 'ಕೇವಲ ಕೈ ಚಳಕವಷ್ಟೇ, ಇಲ್ಲಿ ಕಾವ್ಯವಿಲ್ಲ, ಕೇವಲ ಚಮತ್ಕಾರ, ಪೊಳ್ಳು ಬೊಗಳೆ' ಎಂದು ಬರೆದುದನ್ನು ಜೀರ್ಣಿಸಿ ಕೊಂಡಿದ್ದೇನೆ. 'ಹುಸಿ ಬೌದ್ಧಿಕತೆ' ಎಂದು ಟೀಕಿಸಿದಾಗ ಜ್ಞಾನಮೂಲಗಳಿಗೆ ಅರ್ಪಿಸಿದ್ದೇನೆ. ಬೆನ್ನು ತಟ್ಟಿ ಹುರಿದುಂಬಿಸಬಹುದಾದವರು ಯಾಕೋ ಸುಮ್ಮನೆ ಇರುವಾಗ ಸಪ್ಪಗಾಗಿದ್ದೇನೆ. ಅನಿರೀಕ್ಷಿತ ಗೌರವಗಳು ಬಂದಾಗ ತಲೆಬಾಗಿದ್ದೇನೆ. ಬರೆದ ಇಷ್ಟನ್ನೇ ಎಷ್ಟೋ ಎಂಬಂತೆ ಕಾಣುವ ಸಹೃದಯರ ಕಾವ್ಯಪ್ರೀತಿಗೆ ಶರಣಾಗಿದ್ದೇನೆ.

ಬದುಕು ಅರ್ಥ ತೆರೆದ ಬಾಗಿಲು ಅವರವರ ಭಾವಕ್ಕೆ ಅರ್ಥ ಬರುವುದೇ ಇಲ್ಲಿ. ತೆರೆದ ಹಠವಾಗಲಿ, ತೆರೆಯದ ಹಠವಾಗಲಿ ಮುಖ್ಯವಲ್ಲ. ನಡಿಗೆಯ ಶಿಸ್ತಿಗೆ ಇದು ಈಡಲ್ಲ. ಆದರೆ ಇದು ಅರಿವು ಮಾತ್ರ. ಅರಿವು ನಮ್ಮನ್ನು ಮುನ್ನಡೆಸುವಾಗ ನಮ್ಮ ನಡಿಗೆ ಮುಂದಿನದ್ದನ್ನು ಸೂಚಿಸುವುದರ ಜೊತೆಗೆ ಹಿಂದಿನದ್ದನ್ನೂ ಸೂಚಿಸುತ್ತದೆ. ನಾವು ಯಾವುದನ್ನಾದರೂ ಪ್ರತಿನಿಧಿಸಲು ಅಪೇಕ್ಷೆಪಟ್ಟಲ್ಲಿ ಅದು ಮೂರ್ಖತನ. ಕಾಲಾತೀತ ವಿವೇಕ ಕಟ್ಟಿಕೊಡುವ ಕಾವ್ಯಕ್ಕೆ ನಾವು ವಾರಸುದಾರರಲ್ಲ. ಅದು ನಮ್ಮ ಜೋಳಿಗೆಯ ವಿನಯ ಮತ್ತು ಶ್ರಮ.

ಇಂತಲ್ಲಿ ಕವಿತೆ ನನಗೆ ತಾಯಿಯಂತೆ, ಗೆಳತಿಯಂತೆ ಮತ್ತು ನ್ಯಾಯಾಲಯದ ಕಟಕಟೆಯಂತೆ. ರೂಪಾಂತರ ಸತ್ಯದಲಿ ಬದುಕಿನ ವಾತ್ಸಲ್ಯಕ್ಕೆ, ಸಂತೋಷಕ್ಕೆ ಮತ್ತು ಪಾಟಿ

ಸವಾಲಿಗೆ ಕಾವ್ಯದ ಮೂಲಕ ಪ್ರತಿಕ್ರಿಯಿಸಿದ್ದೇನೆ. ನಾನು ಬರೆಯುವ ಬೆಳಗಿನ ಜಾವದ ಗಳಿಗೆ ನಿಷ್ಕಲ್ಮಶ ಗಳಿಗೆ. ಬಿಳಿಯ ಹಾಳೆಯ ಮುಂದೆ ಕೂತು ಶೂನ್ಯವನ್ನು ಅನುಭವಿಸುವ ಶ್ರೇಷ್ಠಗಳಿಗೆ ಶಬ್ದದ ಲಜ್ಜೆಯ ಅರಿವಿನಲ್ಲೇ ಆಕಾರ ಕಟ್ಟಿಕೊಳ್ಳುವ ಇರಾದೆ. ಯಶಸ್ಸು, ಅಯಶಸ್ಸುಗಳನ್ನು ತೋರುತ್ತಲೇ ಒಳಗಿನ ಮಿತಿಗಳನ್ನು ಅರಿತುಕೊಳ್ಳುವ ಅರ್ಥಪೂರ್ಣ ಅವಕಾಶ ಇಲ್ಲಿದೆ.

ಕಾವ್ಯ ಅಂತಿಮ ಸತ್ಯವೇನಲ್ಲ. ಅದು ತೆರೆದ ಸತ್ಯ. ಅದನ್ನು ಅಂತಿಮವೆಂದು ಬಗೆದೊಡನೆ ಭ್ರಮೆಗಳು ಶುರುವಾಗಿ ಬಿಡಬಹುದು. ಅದು ಹೀಗಿದ್ದರೆ ಚೆನ್ನ ಎಂದು ಭಾವಿಸುವುದು ತಪ್ಪಾಗಲಾರದು. ಆದರೆ ಅದೇ ಪೂರ್ವಗ್ರಹವಾದಲ್ಲಿ ಸರಿಯಿರಲಾರದು. ತೆರೆದ ಮನಃಸ್ಥಿತಿಯಲ್ಲಿ ಅಂತಿಮ ನಿಲ್ದಾಣವೆಂದಿರುವುದಿಲ್ಲ. ಅಲ್ಲಿ ಅದೊಂದು ಯಾನ. ನಮ್ಮ ಕಾವ್ಯ ಮನಃಸ್ಥಿತಿ ಉತ್ಸಾಹದಿಂದಿದ್ದರೂ ಹಠದಿಂದ ಮುಕ್ತನಾಗಿಲ್ಲ ಎಂಬ ಭಾವನೆ ನನ್ನದು. ಹೀಗಾಗಿ ನಿಲುಗಡೆಗಳೇ ಅಧಿಕವಾಗಿ ಯಾನವೆಂಬುದು ತಡವರಿಸುತ್ತಿದೆ. ಕಾವ್ಯವಿಲ್ಲದೆಯೂ ಬಾಳಲು ಸಾಧ್ಯ ಎಂಬ ದಿಟ್ಟತನವೇ ಕಾವ್ಯಮೂಲದ ಅಹಂಕಾರ ಇಳಿಸಿ ಜೀವಂತಿಗೆ ಕಾಪಾಡಿಕೊಳ್ಳಲು ಸಾಧ್ಯವಾದೀತು. ಆದರೆ ಅರ್ಧಸತ್ಯವಿರಲಿ, ಅಂತಿಮ ಸತ್ಯವಿರಲಿ ನಮ್ಮ ನೋಟ ಪ್ರಾಮಾಣಿಕ ಆಗಿರಬೇಕು ಎಂಬುದು ವಾಸ್ತವ ಸತ್ಯ.

ಇವುಗಳ ಜೊತೆಗಿನ ಮುಖಾಮುಖಿಯಲ್ಲಿ ನನಗೆ ಹಿರಿಯರು ಯಾವಾಗಲೂ ಹಿರಿಯರಾಗೇ ಕಾಣುವುದಿಲ್ಲ. ಕಿರಿಯರೂ ಕೇವಲ ಕಿರಿಯರಾಗಿರುವುದಿಲ್ಲ. ಶ್ರೇಷ್ಠರು ಎನಿಸಿಕೊಂಡವರ ಸಾಲಿನಂತೆಯೇ ಯಾರೋ ಗೊತ್ತಿಲ್ಲದ ಹೊಸ ಕವಿಯ ಸಾಲೂ ನನ್ನನ್ನು ಪ್ರಭಾವಿಸುತ್ತದೆ. ಇದು ನನಗೆ ವ್ಯಕ್ತಿಗಿಂತಲೂ ಕಾವ್ಯಸಂದರ್ಭ ಮತ್ತು ಪರಂಪರೆಗೆ ಶರಣಾಗಿರುವಂತೆ ಮಾಡಿದೆ. ಭಾವ, ಅರ್ಥ, ಮೆದುಳು, ಹೃದಯ ಮುಂತಾದ ತಿಳುವಳಿಕೆ ಚೆನ್ನ. ಆದರೆ ಅಲ್ಲಿನ ಮೊಂಡುತನ ನಗೆ ತರಿಸುತ್ತದೆ. ಅದಕ್ಕೆ ಮೀಮಾಂಸೆಯನ್ನು ಆರೋಪಿಸಿಕೊಳ್ಳುವುದು ಇನ್ನೂ ತಮಾಷೆ. ಇತಿಹಾಸ ಸೃಷ್ಟಿಸುವವರು ಕೇವಲ ಶಾಸನದ ಬಂಡೆಯ ಮೇಲೆ ಮಲಗಿದರೆ ಸಾಲದು. ಅದು ಮಾಯಾದಂಡವನ್ನು ಕೈಯಲ್ಲಿ ಹಿಡಿದ ಜಾದೂಗಾರ ಸೂತ್ರಗಳನ್ನು ಬಾಯಿಪಾಠ ಮಾಡುತ್ತ ನಿಂತಂತೆ. ಇರಲಿ, ಪ್ರತಿ ಪ್ರಯತ್ನವೂ ಒಂದರ ಆಕರಣೆ ಇನ್ನೊಂದರ ನಿರಾಕರಣೆ ಎಂಬ ಸರಳ ತರ್ಕ ಯಾವಾಗಲೂ ಸರಿಯಿರಲಾರದು.

ಕಾರಣ ಪುರುಷರಾಗಬಹುದಾದ ನಾವು ವಿನಾಕಾರಣ ಪುರುಷರಾಗುತ್ತಿದ್ದೇವೇನೋ ಎಂಬ ಆತಂಕ ಸಾಹಿತ್ಯಕ್ಕಿಂತಲೂ ಸಾಹಿತ್ಯೇತರ ಸಂಗತಿಗಳು ನಮ್ಮನ್ನಾಳುತ್ತಿರುವಾಗ ನನ್ನಲ್ಲಿ ಬಲವಾಗುತ್ತಿದೆ. ಕವಿಗಳೇ ಕೂತು ಕಾವ್ಯಕಷ್ಟ, ನಿರ್ಮಿತಿ ಸ್ವರೂಪಗಳ ಬಗ್ಗೆ ಹೆಣ್ಣುಮಕ್ಕಳು ಮನೆವಾರ್ತೆಗಳನ್ನು ಹಂಚಿಕೊಂಡಷ್ಟೇ ಸಹಜವಾಗಿ ಹಂಚಿಕೊಳ್ಳುವುದು ಕನಸಾಗಿಯೇ ಉಳಿಯಬಹುದೇ? ‘ಕಾವ್ಯಾನುಭವ ಮಂಟಪ’ವೊಂದು ಸಾಧ್ಯವಾಗಬಹುದೇ? ಕವಿತೆ ಕನಸನ್ನು ಕಾಪಾಡಿ, ಕನಸು ಕವಿತೆಯನ್ನು ಕಾಪಾಡಿ ನಮ್ಮ ಕ್ರಿಯೆಯ ಚೈತನ್ಯವಾಗಿರಲಿ.

‘ಕ್ರಿಯಾ ಮಥನವಿಲ್ಲದೆ ಕಾಣಬಂದುದೇ ಕ್ಷೀರದೊಳಗಣ ಘೃತ
ಕ್ರಿಯಾ ಮಥನವಿಲ್ಲದೆ ಕಾಣಬಂದುದೇ ಕಾಷ್ಠದೊಳಗಣ ಅಗ್ನಿ’.



## ಸ ಪ ಸ ...

ಜಿ.ಕೆ. ರವೀಂದ್ರಕುಮಾರ್

ಪೇಟಿ ಹಿಡಿದ ಮಾಸ್ತರು
ತೊಡೆಯ ಹಿಡಿದ ಮಕ್ಕಳು
ಹೇಳಿಕೊಂಡ ಸಪಸ ಕೂಗಿಕೊಂಡಂತೆ ಹೊರಗೆ
ಸಗೊಂದು ಮನೆ ಪಗೊಂದು ಮನೆ
ಮತ್ತೊಬ್ಬ ಸ
ಹೆಸರು ಒಂದೇ, ಮನೆಯು ಬೇರೆ.
ಮೂವರನ್ನೂ ಒಟ್ಟಿಗೇ ಕರೆಯಬೇಕು
ಅವನವನ ಸ್ಥಾನಮಾನ ನೋಡಿಕೊಂಡು
ಸೂಕ್ಷ್ಮ ಗುರುತಿಸಿಕೊಂಡು.
ಯೂನಿಫಾರಂ ಧರಿಸಿ ಕರೆದವು
ಬಣ್ಣದ ಬಟ್ಟೆ ಹಾಕಿ ಕರೆದವು
ಬಿಳಿಬಟ್ಟೆಯುಟ್ಟು ಕರೆದವು
ವಾರ ಮುಗಿದರೂ ಅವರು ಬರಲಿಲ್ಲ
ಮನೆಯೊಳಗೇ ಕೂತು ಏನು ಮಾಡುತ್ತಿದ್ದಾರೋ
ಜಂಭಗಾರರು.
ಬರದಿದ್ದರೂ ಪರವಾಯಿಲ್ಲ
ಚಂದ ಕರೆದರೆ ಸಾಕು ಇವರಿಗೊಂದು ಮನೆ ಸಿಗುವುದಂತೆ
ಕಮಲೆಗೆ ಕಪ್ಪು ಒಂದನೇ ಮನೆಯಂತೆ
ಬಸವನಿಗೆ ಬಿಳಿ ಎರಡನೇ ಮನೆಯಂತೆ
ಹೀಗೇಕೆ?
ಮಕ್ಕಳು ಸುಮ್ಮಗೆ ಕೂತವು
ಮಾಸ್ತರು ಗದರಿದರು
ಶುರುವಾಯಿತು ಸ ಪ ಸ.
ಬಸವ ಕಮಲೆಯರು ದುರುಗುಟ್ಟಿಕೊಂಡರು!
ಕಮಲೆಯ ಮನೆಯಲ್ಲಿ ಬಸವ ಶುರುಹಚ್ಚಿದ
ಬಸವನ ಮನೆಯಲ್ಲಿ ಕಮಲೆ ಚೀರಿದಳು
ಶಾಂತಿ ಸೂರಿ ರಮ್ಯ ಕೃಷ್ಣ
ಒಬ್ಬರ ಮನೆಯೊಳಗೆ ಇನ್ನೊಬ್ಬರು ನುಗ್ಗಿ
ಐಸು ಪೈಸು
ಮನೆ ಮನೆಯ ಕದನ ಶಾಲೆಯೊಳಗೆ
ಮನೆ ಮನೆಯ ಸುದ್ದಿ ಶಾಲೆ ಹೊರಗೆ.
ಮಾಸ್ತರೀಗ ಲಂಬೋದರ ಲಕುಮಿಕರ
ಕೆರೆಯ ನೀರನು ಕೆರೆಗೆ ಚೆಲ್ಲಲು



ಸ ಪ ಸ ಗೀ ಪ ಸಗಳ ಗೊಡವೆಯೇಕೆ?
ಮಾಸ್ತರು ಚೆಲ್ಲೇ ಚೆಲ್ಲಿದರು
ಮಕ್ಕಳು ನೆಂದೇ ನೆಂದವು
ದಾಸರಿಗೆ ಶೀತ ಬಿಡಲಿಲ್ಲ.
ಶೀತ ನೋಡಿಕೊಂಡು ಮಳೆ ನಿಲ್ಲುವುದಿಲ್ಲ
ಮಳೆ ಸುರಿಯಿತು
ನದಿ ಹರಿಯಿತು
ಮಕ್ಕಳು ಬೆಳೆದವು.

*



ರೂಮಿನೊಳಗೆ ಕೂತ ಅಜ್ಜ ಅಜ್ಜಿ
ಶುರುವಿಟ್ಟುಕೊಂಡಿದ್ದಾರೆ ಸ ಪ ಸ ಈಗ
ವಯಸ್ಸಲ್ಲದ ವಯಸ್ಸಲ್ಲಿ
ಮೊಮ್ಮಕ್ಕಳು ಶುರುಹಚ್ಚಿವೆ ಇನ್ನೊಂದು ರೂಮಿನಲ್ಲಿ.
ಹೀಗೊಂದು ಅಲೆ ಹಾಗೊಂದು ಅಲೆ
ಯಾರಿಗೆ ಯಾರು ಪ್ರಶ್ನೆ ಉತ್ತರ
ಬಸವ ಕಮಲೆ ಗೊಂದಲದಲ್ಲಿ
ನಡುಮನೆಯಲ್ಲಿ.
ನಿನ್ನ ಮನೆಯಲ್ಲಿ ನಾನು ಹಾಡಬಾರದಿತ್ತು
ನನ್ನ ಮನೆಗೆ ನೀನು ನುಗ್ಗಬಾರದಿತ್ತು
ಆ ಮನೆ ಈ ಮನೆ ಅಲೆಯಬಾರದಿತ್ತು.
ಇತ್ತು ಗಿತ್ತು ಮುಗಿದು
ನೋಡುತ್ತ ಕೂತರು ಸುಮ್ಮನೆ.
ಅವಳ ಕಣ್ಣ ಹನಿ ಸ ಎಂದಿತು
ಅವನ ನಗೆ ಪ ಎಂದಿತು
ಅವರ ತಬ್ಬುಗೆ ಸ ಎಂದು ತಾರಕದಲ್ಲಿ ಕೂಗಿತು.
ಎರಡೂ ಕೋಣೆಗಳ ಬಾಗಿಲು ತೆರೆದುಕೊಂಡವು
ಪ್ರಶ್ನೆ ಕೇಳಲಿಲ್ಲ ಉತ್ತರ ಹೇಳಲಿಲ್ಲ
ಒಟ್ಟಿಗೇ ಕೂತರು ಉಂಡರು ನಕ್ಕರು
ಕಮಲೆಯ ನೆತ್ತಿ ಹತ್ತಿತು.
ಮೇಲೆ ನೋಡು ಎಂದನು ಬಸವ
ಎಲ್ಲರೂ ಮೇಲೆ ನೋಡಿದರು
ಮನೆಯೀಗ ಶುರುವಿಟ್ಟುಕೊಂಡಿದೆ
ಸ ಪ ಸ
ಹೊರಗೆ ಪೇಟಿ ಹಿಡಿದು ನಿಂತ ಭಿಕ್ಷುಕ.

# ಶತಮಾನದ ಕನ್ನಡ ನಾಟಕ - ಒಂದು ಅವಲೋಕನ



ಎಚ್.ಕೆ. ರಾಮಮೂರ್ತಿ

ಕರ್ನಾಟಕ ಸಾಹಿತ್ಯ ಅಕಾಡೆಮಿ ಇತ್ತೀಚೆಗೆ 'ಶತಮಾನದ ನಾಟಕ' ಸಂಪುಟವನ್ನು ಪ್ರಕಟಿಸಿ ಕನ್ನಡ ಸಾಹಿತ್ಯಕ್ಕೆ ಹಾಗೂ ರಂಗಭೂಮಿಗೆ ಸಲ್ಲಬೇಕಾದ ಗೌರವಗಳನ್ನು ಸಲ್ಲಿಸಿದೆ. ಕನ್ನಡದ ರಂಗ ಚಟುವಟಿಕೆ ಹಾಗೂ ನಾಟಕ ಸಾಹಿತ್ಯ - ಈ ಎರಡೂ ಪ್ರಕಾರಗಳಲ್ಲಿ ನೈಪುಣ್ಯತೆಯನ್ನು ಹೊಂದಿರುವವರೆಂದು ಗುರುತಿಸಿ ಪ್ರಧಾನ ಸಂಪಾದಕರು ಹಾಗೂ ಯೋಜನಾ ಸಂಪಾದಕರುಗಳು ಶ್ರೀ ಕೆ. ಮರುಳುಸಿದ್ದಪ್ಪನವರಿಗೆ ಈ ಕಾರ್ಯ ವಹಿಸಿದ್ದರು. ಅಂತೆಯೇ ಕೃತಿಯ ಸಂಪಾದಕರು ಹದಿನೇಳು ನಾಟಕಗಳನ್ನು ಗುರುತಿಸಿ ಪ್ರಕಟಿಸಿದ್ದರ ಜೊತೆಗೆ ಈ ಒಂದು ಶತಮಾನದಲ್ಲಿ ಕನ್ನಡ ನಾಟಕ ನಡೆದು ಬಂದ ದಾರಿ ಹಾಗೂ ಶತಮಾನದ ಶ್ರೇಷ್ಠ ನಾಟಕಕಾರರ ಕೃತಿಗಳನ್ನು ತಮ್ಮ ಪೀಠಿಕೆಯಲ್ಲಿ ದೀರ್ಘವಾಗಿ ವಿಮರ್ಶಿಸಿದ್ದಾರೆ.

ಸಾಮಾನ್ಯವಾಗಿ ಕನ್ನಡ ರಂಗಭೂಮಿಯ ಚರಿತ್ರೆಕಾರರು ಅಭಿಪ್ರಾಯಪಡುವಂತೆ ಈ ಯೋಜನೆಯಲ್ಲಿಯೂ ಸಹ ಕನ್ನಡ ರಂಗಭೂಮಿಯನ್ನು ಸ್ಥೂಲವಾಗಿ 'ಹವ್ಯಾಸಿ' ಹಾಗೂ 'ವೃತ್ತಿ' ರಂಗಭೂಮಿಗಳೆಂದು ವಿಭಜಿಸಿ ಪ್ರಾತಿನಿಧಿಕ ನಾಟಕಗಳನ್ನು ಆಯ್ಕೆ ಮಾಡಿದ್ದಾರೆ. ಸುಮಾರು 2-3 ದಶಕಗಳ ಹಿಂದೆಯೇ ಮಾಸ್ಟರ್ ಹಿರಣ್ಣಯ್ಯನವರು, ಹವ್ಯಾಸಿ ರಂಗಭೂಮಿ ಸುಶಿಕ್ಷಿತರ ಪ್ರಕಾರವಾಗುಳಿದು ಹವ್ಯಾಸಿ ಹಾಗೂ ವೃತ್ತಿ ರಂಗಭೂಮಿಯ ಪರಿಣಿತರಿಗೆ ವಿಚಾರ ವಿನಿಮಯ ಮಾಡಲು ಸಲಹೆಯಿತ್ತು, ಇದರಿಂದ ಒಟ್ಟಾರೆ ಕನ್ನಡ ರಂಗಭೂಮಿಯ ಏಳಿಗೆಯಾಗುವುದೆಂದು ಕಳಕಳಿಯಿಂದ ತಮಗೆ ಸಿಕ್ಕ ಅವಕಾಶಗಳಲ್ಲೆಲ್ಲಾ ಈ ವಿಚಾರವನ್ನು ಪುನರುಚ್ಚರಿಸಿದ್ದಾರೆ. ವೃತ್ತಿರಂಗಭೂಮಿಯ ಒಬ್ಬ ಪ್ರಮುಖ ವ್ಯಕ್ತಿಯಾಗಿ ಸಾಮಾಜಿಕ ಕಳಕಳಿಯ ಸ್ಪಂದನಕ್ಕೆ ಪ್ರಯತ್ನಿಸುತ್ತಿರುವ ಮಾಸ್ಟರ್ ಹಿರಣ್ಣಯ್ಯನವರ ಈ ಸಲಹೆ ಗಮನಾರ್ಹವಾದದ್ದೇ ಆದರೂ ಕೂಲಂಕುಶ ವಿಚಾರ ವಿಮರ್ಶೆಯಿಲ್ಲದೆ ಇದೇ ನಿಲುವನ್ನು ಹೊಂದಿರುವ ಅನೇಕ ಬೌದ್ಧಿಕ ವ್ಯಕ್ತಿಗಳಂತೆಯೇ ಶ್ರೀ ಮರುಳಸಿದ್ದಪ್ಪನವರೂ ಸಹ ಇದನ್ನು ಒಪ್ಪಿಕೊಂಡಿರುವುದನ್ನು ಅವರ ಪೀಠಿಕೆಯಿಂದ ಕಾಣಬಹುದು. ವಾಸ್ತವವಾಗಿ ಯವುದೇ ಕಲೆಯನ್ನಾದರೂ ಆ ಕಲೆಯಿಂದ ಒಬ್ಬ ವ್ಯಕ್ತಿಯ ಜೀವನೋಪಾಯಕ್ಕೆ ದಾರಿಯಾಗಿದೆಯೇ ಇಲ್ಲವೇ ಕೇವಲ ಆತ್ಮತೃಪ್ತಿಗೋಸ್ಕರ ಆ ಕಲೆಯನ್ನು ಅಭ್ಯಸಿಸುತ್ತಿದ್ದಾನೆಯೋ ಎಂಬುದರ ಮೇರೆಗೆ 'ವೃತ್ತಿ ಹಾಗೂ ಹವ್ಯಾಸಿ' ಎಂದು ವಿಭಾಜಿಸಿರುವುದೇ ಹೊರತು ಕಲೆಯ ಪ್ರಕಾರವನ್ನು ಅಭ್ಯಾಸಿಗಳ ಪ್ರಕಾರ ವಿಭಜಿಸುವುದು ಅಷ್ಟು ಸೂಕ್ತವಲ್ಲವೆಂದು ಕಾಣುತ್ತದೆ.

ನಾಟಕ ಸಾಮಾಜಿಕ ವಿನೋದ ಮತ್ತು ಶೈಕ್ಷಣಿಕ ಮಾಧ್ಯಮವೆಂದು ಗುರುತಿಸಲ್ಪಟ್ಟ

ಕಾಲದಲ್ಲಿ ವಿಶೇಷವಾಗಿ ಪೌರಾಣಿಕ ವಸ್ತುಗಳು ಜನರ ಮನರಂಜನೆಗೆ ಮತ್ತು ಆದರ್ಶವನ್ನು ಕಂಡುಕೊಳ್ಳುವ ವಸ್ತುವಾಗಿ ನಾಟಕದ ಕೇಂದ್ರ ವಸ್ತುಗಳಾಗಿದ್ದುವು. ಕಾಲಕ್ರಮೇಣ, ಚಾರಿತ್ರಿಕ ತದನಂತರ ಜಾನಪದ ಮತ್ತು ಸಾಮಾಜಿಕ ವಸ್ತುಗಳನ್ನು ಹೊಂದುವುದರಲ್ಲಿ ಯಶಸ್ವಿ ಯಾದುವು. ಅಂತೆಯೇ ಸಂಪೂರ್ಣ ರಾಮಾಯಣ, ಶನಿಮಹಾತ್ಮೆ, ಮಹಾಭಾರತ ನಾಟಕಗಳ ಜೊತೆಗೇ ಕ್ರಮೇಣವಾಗಿ ಎಚ್ಚಮನಾಯಕ, ಟಿಪ್ಪೂ, ದಂತಹ ನಾಟಕಗಳನ್ನು ದಾಟಿ ಸಾಹುಕಾರ, ಲಂಚಾವತಾರದಂತಹ ನಾಟಕಗಳು ವೃತ್ತಿ ರಂಗಭೂಮಿಗೆ ಲಭ್ಯವಾಗಿವೆ. ಅಂದಿನ ಈ ನಾಟಕಗಳೂ ಸಹ ಕೇವಲ ವೃತ್ತಿ ನಾಟಕಗಳಾಗಿರದೆ ವರ್ಷಕ್ಕೆ ಒಂದೆರಡು ಪ್ರಯೋಗಗಳನ್ನು ಹಮ್ಮಿಕೊಳ್ಳುವ ಹವ್ಯಾಸಿಗಳಿಗೂ ಸಹ ವಸ್ತುವಾಯಿತು. ಈ ನಾಟಕಗಳು ಕೇವಲ ಅವಿದ್ಯಾವಂತರಿಗೆ (ನಾಟಕ ಪಾತ್ರವರ್ಗ, ರಚನೆ, ಆಡಳಿತವರ್ಗ) ಅಲ್ಲದೆ ಅಂದಿನ ಪ್ರಚಲಿತ ವಿದ್ಯಾವಂತ ಶ್ರೇಣಿ ಸಹ ಈ ನಾಟಕಗಳಲ್ಲಿ ಪಾಲ್ಗೊಳ್ಳುತ್ತಿದ್ದಂತೆ ಕಾಣುತ್ತದೆ. ಕಳೆದ ಕೆಲವು ದಶಕಗಳಲ್ಲಿಯೇ, ಇಂದಿನಂತೆ ಇಂಜಿನಿಯರ್, ಡಾಕ್ಟರ್, ಎಂ.ಬಿ.ಎ. ಗಳು ಸಹಸ್ರಾರು ಇಲ್ಲದಿದ್ದ ಕಾಲದಲ್ಲಿ ಅಂದಿನ ಕಾಲಕ್ಕೆ ಉತ್ತಮ ವಿದ್ಯಾರ್ಹತೆ ಹೊಂದಿದ್ದ ಬಳ್ಳಾರಿ ರಾಘವ, ಎ.ಎಂ. ನಟೇಶ್ ಸಿ.ಬಿ. ಜಯರಾವ್, ಕೃಷ್ಣ ಡಾ|| ಎಚ್.ಕೆ. ರಂಗನಾಥ್, ಜಿ.ವಿ. ಶಿವಾನಂದ, ಕೃಷ್ಣಸ್ವಾಮಿ ಅಯ್ಯಂಗಾರ್ ತಾಪತ್ಸೈಯ್ಯಂಗಾರ್ ಜಿ.ವಿ. ಅಯ್ಯರ್ ಮತ್ತು ಇನ್ನೂ ಅನೇಕರು 'ಅಂದಿನ' ರಂಗಭೂಮಿಯಲ್ಲಿ ಸಕ್ರಿಯ ಪಾತ್ರ ವಹಿಸುತ್ತಿದ್ದರು. ಇವರೆಲ್ಲರ ಭಾಗವಹಿಸುವಿಕೆಯಿಂದಲೂ ಬದಲಾವಣೆ ಹೊಂದದ ಕನ್ನಡ ರಂಗಭೂಮಿ ಅಂದಿನ ಪ್ರೇಕ್ಷಕರ ಅವಶ್ಯಕತೆಗಳನ್ನು ಸ್ಪಂದಿಸುತ್ತಿದ್ದುದು ಸ್ಪಷ್ಟವಾಗಿದೆ.

ಯಾವುದೇ ಪ್ರಯೋಗಶೀಲ ವ್ಯಕ್ತಿ ಅಥವಾ ತಂಡ ವೃತ್ತಿಪರತೆಯನ್ನು ಹೊಂದುವ ಅಗತ್ಯವನ್ನು ಕಂಡುಕೊಂಡಿರುವ ಇಂದಿನ ಕಾಲದಲ್ಲಿ ಅನೇಕ 'ರೆಪರ್ಟರಿ' ತಂಡಗಳು ಸ್ಥಾಪಿಸಲ್ಪಟ್ಟಿವೆ. ನಮ್ಮ ಕರ್ನಾಟಕದ ರಂಗಾಯಣ ಅಥವಾ ನೀನಾಸಂಗಳನ್ನ 'ಹವ್ಯಾಸಿ' ಎಂದು ಯಾರೂ ಕರೆಯಲಾಗದಿದ್ದರೂ ಅವರುಗಳು ಆಯ್ದುಕೊಳ್ಳುವ ನಾಟಕಗಳು ಗಿರೀಶ್ ಕಾರ್ನಾಡ್, ಶ್ರೀರಂಗರ ಸಾಲಿನಲ್ಲಿ ನಿಲ್ಲುವ ಆಧುನಿಕ ನಾಟಕ ವಸ್ತಗಳನ್ನೇ, ಹೀಗಿರುವಲ್ಲಿ ಇಂದು ನಾವು ವಿಭಜಿಸಿರುವ 'ಹವ್ಯಾಸಿ' ಹಾಗೂ 'ವೃತ್ತಿ' ನಾಟಕಗಳ ವಿಭಜನೆ ದೋಷಪೂರಿತವಾಗಿದೆಯೆನ್ನದೆ ವಿಧಿಯಿಲ್ಲ ಪ್ರಾಯಶಃ 'ಪರಂಪರಾ ರಂಗಭೂಮಿ' ಮತ್ತು 'ಆಧುನಿಕ ರಂಗಭೂಮಿ' ಎಂಬ ವರ್ಗೀಕರಣ ನೈಜತೆಗೆ ಅತಿ ಹತ್ತಿರವಾಗಿ ಕಾಣುತ್ತದೆ.

ಕನ್ನಡ ಆಧುನಿಕ ರಂಗಭೂಮಿ ದಾರಿದ್ರ್ಯದಲ್ಲಿಲ್ಲದೆ ಶ್ರೀಮಂತಿಕೆಯಲ್ಲಿದ್ದರೆ ನಮ್ಮ 'ಪರಂಪರಾ ರಂಗಭೂಮಿ' ಸಹ ಕನಿಷ್ಠ ಅಷ್ಟೇ ಮಟ್ಟಿಗೆ ಶ್ರೀಮಂತಿಗೆಯನ್ನು ಹೊಂದಿರುತ್ತದೆ. ಬೆಳ್ಳಾವೆ ನರಹರಿಶಾಸ್ತ್ರಿ, ಬಿ.ಪುಟ್ಟಸ್ವಾಮಪ್ಪಾ ಇವರ ಹಂತದ ಅನೇಕ ನಾಟಕಕಾರರಲ್ಲದೆ ಈಚಿನ ಕಣಗಾಲ್ ಪ್ರಭಾಕರಶಾಸ್ತ್ರಿ ಮತ್ತು ಹುಣಸೂರು ಕೃಷ್ಣಮೂರ್ತಿಯಂತಹವರವರೆಗೆ ಅನೇಕ ನಾಟಕಕಾರರು ರಚಿಸಿದ ಪರಂಪರಾ ನಾಟಕಗಳನ್ನು ಅನೇಕ ತಂಡಗಳು ಪ್ರದರ್ಶಿಸಿದೆ. ಇಂದಿನ ಹವ್ಯಾಸಿ ರಂಗಭೂಮಿಯ ತಂಡಗಳು ಪ್ರದರ್ಶಿಸುವ ಗರಿಷ್ಠ (ಸಾಮಾನ್ಯವಾಗಿ ಅಪವಾದಗಳಿವೆ) 4ರಿಂದ 10 ಪ್ರದರ್ಶನಗಳು ಗೌಣವೆನ್ನುವಂತೆ ಪರಂಪರಾ ರಂಗಭೂಮಿ

ನೂರಾರು ಪ್ರದರ್ಶನಗಳನ್ನಿತ್ತು ಕನ್ನಡ ರಂಗಭೂಮಿಯ ಆಧಾರಸ್ತಂಭಗಳೆಂದು ಹೆಸರಿಸುವಂತೆ ಆಗಿವೆ. ಅಣಕದ ವಿಷಯವೆಂದರೆ ಈ ನಾಟಕಗಳು ಪ್ರಸಿದ್ಧಿಯಾಗಿದ್ದ ಕಾಲದಲ್ಲಿ ಹಸ್ತಪ್ರತಿಯಾಗಿಯೇ ಉಳಿದಿದ್ದ ಈ ನಾಟಕಗಳಲ್ಲಿ ಈಗ ಅನೇಕ ನಾಟಕಗಳು ಅಚ್ಚಾಗಿದೆ. 2-3 ನಾಟಕಗಳಿಗಿಂತ ಹೆಚ್ಚಿಗೆ ಹೊರಬಾರದಿರುವ ಆಧುನಿಕ ನಾಟಕಕಾರರ ನಾಟಕಗಳಿಗೆ 'ಶತಮಾನದ ನಾಟಕ' ದಲ್ಲಿ ಸಿಕ್ಕಿದ ಸ್ಥಾನ ಕರ್ನಾಟಕದ ಮೂಲೆ ಮೂಲೆಯಲ್ಲಿ ಜನರನ್ನು ರಂಜಿಸಿದ ಉತ್ತಮ ಪರಂಪರಾ ನಾಟಕಗಳಿಗೆ ದೊರಕದಿದ್ದುದು ಆಶ್ಚರ್ಯದ ಎಲ್ಲೆಯನ್ನು ಮೀರಿ ಅಕಾಡೆಮಿಯ ಪೂರ್ವಗ್ರಹ ಪೀಡಾ ಮನೋಬುದ್ಧಿಯನ್ನು ಪ್ರಶ್ನಿಸುವಂತಾಗಿದೆ. ಈ ಹೊತ್ತಿಗೆಯ ಧ್ಯೇಯ ''..... **ಈ ಶತಮಾನದ ಬದುಕನ್ನು ಪ್ರಭಾವಿಸಿದ ವಿವಿಧ ವೈಜ್ಞಾನಿಕ, ರಾಜಕೀಯ ಮತ್ತು ಸಾಮಾಜಿಕ ಚಿಂತನೆಗಳಿಗೆ, ತನ್ನ ಪರಂಪರೆಗೆ ಹಾಗೂ ವರ್ತಮಾನಕ್ಕೆ ಕನ್ನಡದ ಸೃಜನಶೀಲತೆ ಹಾಗೂ ವೈಚಾರಿಕತೆಗಳು ಹೇಗೆ ಸ್ಪಂದಿಸಿದೆ ಎಂಬುದನ್ನು ಈ ಸಂಕಲನದ ಬರಹಗಳು ಪ್ರತಿನಿಧಿಸುವಂತಿರಬೇಕು''** ಮಹತ್ತರವಾದುದು. ಈ ಧ್ಯೇಯಕ್ಕೆ ನಮ್ಮ ಪರಂಪರಾ ನಾಟಕಗಳಲ್ಲಿ ಏಕಮೇವ ಪ್ರಾತಿನಿಧ್ಯವೂ ಸಿಕ್ಕಲಿಲ್ಲವೆಂದರೆ ಆಶ್ಚರ್ಯದ ಸಂಗತಿ. ''ಆದರೆ ಇದಿಷ್ಟೇ ಕನ್ನಡ ನಾಟಕವಲ್ಲವೆಂಬ ಅರಿವೂ ನಮಗಿರಬೇಕಾಗುತ್ತದೆ'' ಎಂಬ ಒಂದು ಸಾಲಿನಲ್ಲಿ ಕರ್ತವ್ಯದ ಹೊರೆಯನ್ನು ಪ್ರಚ್ಛೇಕರಿಸುವುದು ಜಾಣತನವಾಗಬಹುದು - ಹೊಣೆಗಾರಿಕೆಯನ್ನು ನೆರವೇರಿಸಿದಂತಾಗುವುದಿಲ್ಲ.

ಸಂಕಲನದ ಆಯ್ಕೆಯ ಮಾನದಂಡವನ್ನು ಗುರುತಿಸಿರುವ ಸಂಪಾದಕರು ಈ ಸಂಕಲನ ಇಪ್ಪತ್ತನೆಯ ಶತಮಾನದ ಆಧುನಿಕ ರಂಗಭೂಮಿ ಮತ್ತು ಸಾಹಿತ್ಯವೆರಡನ್ನು ಪ್ರತಿನಿಧಿಸುವಂತಿರಬೇಕು ಮತ್ತು ರಂಗಭೂಮಿಯ ಚರಿತ್ರೆಯ ದೃಷ್ಟಿಯಿಂದ ಮತ್ತು ಕಲಾತ್ಮಕವಾಗಿ ಸ್ಪರ್ಧೆಯಾಗುವ ನಾಟಕಗಳಿಗೆ ಮಹತ್ವವಿರಬೇಕು ಎಂದಿದ್ದಾರೆ. 'ಗೋಕುಲ ನಿರ್ಗಮನ' ಸಂದೇಹಾತೀತವಾಗಿ ಪು.ತಿ.ನ ರವರ ಒಂದು ಉತ್ಕೃಷ್ಟ ಕೃತಿ. ಆದರೆ ನೀನಾಸಂ ತಂಡ ಮತ್ತು ಬಿ.ವಿ. ಕಾರಂತರ ಪಾತ್ರಗಳಿಲ್ಲದಿದ್ದರೆ ಈ ಕೃತಿ ಬೇರಾವ ತಂಡ/ನಿರ್ದೇಶಕರಿಂದ ಪ್ರಯೋಗಿಸಿದ್ದರೂ 'ಕೇವಲ ಸಾಹಿತ್ಯ ಪರಂಪರೆಗೆ ಸೇರಬಹುದೇ ಹೊರತು ರಂಗ ಪರಂಪರೆಗೆ ಅಲ್ಲವೆಂದು ಹೇಳಬಹುದಾಗಿದೆ'ಯೆಂದು ಸಂಕಲನದಿಂದ ಹೊರಗುಳಿಯುವ ಅಪಾಯವನ್ನು ಪ್ರಾಯಶಃ ಎದುರಿಸಬೇಕಾಗಿತ್ತೇನೋ. ಅಂತೆಯೇ ಪ್ರಾಯಶಃ ಬಿ.ವಿ. ಕಾರಂತರು ಎಂ.ಆರ್.ಶ್ರೀಯವರ 'ನಾಗರಿಕ' ಅಥವಾ ಬಿ.ಎಂ.ಶ್ರೀಯವರ 'ಅಶ್ವತ್ಥಾಮನ್' ಪ್ರದರ್ಶನಕ್ಕೆ ಇಂಬುಕೊಟ್ಟಿದ್ದರೆ, ಈ ನಾಟಕಗಳು ಸಂಕಲನದಲ್ಲಿ ಪ್ರತಿಷ್ಠಿತ ಸ್ಥಾನವನ್ನು ಹೊಂದಿರುವ ಸಾಧ್ಯತೆಗಳೂ ಇವೆ. ಇದೇ ಮಾನದಂಡದ ಪ್ರಕಾರ ಕನಿಷ್ಠ ಇಂತಹ ಒಂದೆರಡು ನಾಟಕಗಳಿಗಾದರೂ ಈ ಸಂಕಲನದಲ್ಲಿ ಪ್ರಾತಿನಿಧ್ಯ ಇರಬೇಕಾದುದು ಸ್ವಾಭಾವಿಕವೆನ್ನಿಸುತ್ತದೆ.

ಆಯ್ಕೆಯ ಮತ್ತೊಂದು ಮಾನದಂಡ ನಾಟಕಗಳು ಸ್ವತಂತ್ರ ಕೃತಿಗಳಾಗಿರಬೇಕಾದ ಅವಶ್ಯಕತೆ. ಈ ಅವಶ್ಯಕತೆಯನ್ನು ಸಂಪಾದಕರು ತಮ್ಮ ಪೀಠಿಕೆಯಲ್ಲಿ ವಿಸ್ತರಿಸುತ್ತಾ ಅನುವಾದ ರೂಪಾಂತರಗಳು ಆಧುನಿಕ ಕನ್ನಡ ನಾಟಕ ಪರಂಪರೆಯನ್ನು ಬೆಳೆಸುವಲ್ಲಿ ಎಷ್ಟೇ ಮಹತ್ವದ

ಪಾತ್ರ ವಹಿಸಿದ್ದರೂ ಅವುಗಳನ್ನು ಸಂಕಲನದಲ್ಲಿ ಸಮಾವೇಶಗೊಳಿಸಿಲ್ಲ ಎಂದು ಹೇಳಿದ್ದಾರೆ. ಬಿ.ಎಂ.ಶ್ರೀಯವರ ಅಶ್ವತ್ಥಾಮನ್ ಕನ್ನಡ ನಾಟಕ ಪೀಳಿಗೆಗೇ ಕಳಶದಂತೆ ಎಂಬುದು ನಿರ್ವಿವಾದ. ಇನ್ನು ರಂಗಭೂಮಿಯಲ್ಲಿ ನಾಟಕದ ಅನೇಕ ಪ್ರದರ್ಶನಗಳು ಯಶಸ್ವಿಯಾಗಿವೆ. ಶ್ರೀಯವರು ನಮ್ರತೆಯಿಂದ ನಾಟಕದ ಶೈಲಿ ಹಾಗೂ ಏಜಾಕ್ಸ್‌ನೊಂದಿಗೆ ಅಶ್ವತ್ಥಾಮನ್‌ನ ಸಾಮ್ಯತೆಯನ್ನು ಒಪ್ಪಿಕೊಂಡಿರಬಹುದು. ನಾಟಕದ ಪ್ರಾಕಾರ ನಾಟಕಕಾರರು ತಮಗೆ ಅನ್ವಯಿಸಿಕೊಂಡ ಒಂದು ನಿಯಮವಷ್ಟೆ. ಒಂದೇ ಪ್ರಾಕಾರದಲ್ಲಿ ಪ್ರಪಂಚದ ಬೇರೆ ಬೇರೆ ರಂಗಭೂಮಿಗಳಿಗೆ ಆಯಾ ನಾಟಕಕಾರರ ಕೊಡುಗೆಯಿದ್ದೇ ಇರುತ್ತದೆ. ಪ್ರಾಕಾರದ ಗುರುತಿಸುವಿಕೆ ಅನುವಾದ ಅಥವಾ ಭಾಷಾಂತರವೆನ್ನಿಸುವುದಿಲ್ಲ. ಹಾಗಿದ್ದಿದ್ದರೆ ಎಲ್ಲ ಅಸಂಗತ ನಾಟಕಗಳನ್ನು ಮತ್ತು ಪಾಶ್ಚಾತ್ಯ ನಾಟಕಗಳ ಮಾದರಿಯ ನಾಟಕಗಳನ್ನೆಲ್ಲಾ ಸ್ವತಂತ್ರ ಕೃತಿಗಳಲ್ಲ ಎಂದೇ ತೀರ್ಮಾನಿಸಬೇಕಾಗುತ್ತದೆ. ವಸ್ತುವಿನಲ್ಲಿ ಸಾಮ್ಯತೆಯಿದ್ದರೂ ಅದು ಕೇವಲ ಆಕಸ್ಮಿಕ ಅಷ್ಟೆ. ಪುರಾಣದ ವಸ್ತುವನ್ನು ಆಯ್ಕೆ ಮಾಡಿ ಅಶ್ವತ್ಥಮನ್‌ನನ್ನು ದುರಂತ ನಾಯಕನೆಂದು ಪ್ರತಿಪಾದಿಸುವ ಸಂದರ್ಭದಲ್ಲಿ ಆದ ಮಾರ್ಪಾಡು ಈ ರೀತಿಯ ನಾಟಕಕ್ಕೆ ಬೇಕಾದ ಅವಶ್ಯಕತೆ. ಶ್ರೀಯವರು ಇದನ್ನು ರಚಿಸಿದಾಗ ಗ್ರೀಕ್ ನಾಟಕಗಳ ಸ್ಮರಣೆ ಮಾಡದಿದ್ದರೆ ಈ ನಾಟಕವನ್ನು ರೂಪಾಂತರವೆಂದು ಕರೆಯುವ ಧೈರ್ಯ ಯಾವ ವಿಮರ್ಶಕರಿಗೂ ಬರುತ್ತಿರಲಿಲ್ಲ. ಶ್ರೀರಂಗರ 'ಕತ್ತಲೆ ಬೆಳಕು' ನಾಟಕದಲ್ಲಿ ಪಿರಾಂಡಲೋನ ಛಾಯೆಯನ್ನು ಅನೇಕರು ಗುರುತಿಸಿದರೂ ಸಹ ಸ್ವತಃ ಶ್ರೀರಂಗರೇ ಸಾಕ್ಷಿ ಪುರಾವೆಗಳಿಂದ ಸಾಮ್ಯತೆ ಕೇವಲ ಕಾಕತಾಳೀಯವೆಂದು ಪ್ರತಿಪಾದಿಸುತ್ತಿದ್ದುದರಿಂದ ಯಾವ ವಿಮರ್ಶಕರು ಅಧಿಕೃತವಾಗಿ ಕತ್ತಲೆ-ಬೆಳಕನ್ನು ರೂಪಾಂತರವೆಂದು ಕರೆಯಲಿಲ್ಲ. ಸಾಮ್ಯತೆ ಪೂರ್ವಯೋಜನೆಯಲ್ಲದೆ ಕತ್ತಲೆ ಬೆಳಕು ಹೇಗೆ ಒಂದು ಮೇರು ಕೃತಿಯೋ ಅಂತೆಯೇ ಕೇವಲ ಸಾಮ್ಯತೆಯನ್ನು ಗುರುತಿಸಿದ್ದರೂ ಸಹ ಅಶ್ವತ್ಥಾಮನ್ ಒಂದು ಸ್ವತಂತ್ರ ಕೃತಿ - ಕನ್ನಡ ನಾಟಕ ಪೀಳಿಗೆಗೆ ಕಿರೀಟ ಪ್ರಾಯದಂತಿರುವುದು. ಶ್ರೀಯವರ ನಾಟಕವಿಲ್ಲದೆ ಯಾವುದೇ ಸಂಕಲನವೂ ಶತಮಾನವನ್ನು ಪ್ರತಿನಿಧಿಸುವುದು ಅಸಂಗತ.

ಶ್ರೀಯವರ ನಾಟಕಗಳಿಗೆ ಸಿಗದ ಭಾಗ್ಯ ಜಿ.ಬಿ. ಜೋಷಿಯವರ 'ಕದಡಿದ ನೀರು' ನಾಟಕಕ್ಕೆ ಲಭಿಸಿರುವುದು ಒಂದು ವೈಪರೀತ್ಯ ಸಂಪಾದಕರು ತಮ್ಮ ಮುನ್ನುಡಿಯಲ್ಲಿ **''ಶ್ರೀರಂಗರ ಶೋಕಚಕ್ರದಂತೆಯೇ ಕದಡಿದ ನೀರು, ಸ್ವಾತಂತ್ರ್ಯೋತ್ತರ ಭಾರತದ ರಾಜಕೀಯ ಹಾಗೂ ಸಾಮಾಜಿಕ ಅವನತಿಯನ್ನು ಪರಿಣಾಮಕಾರಿಯಾಗಿ ಶೋಧಿಸುತ್ತದೆ''** ಎಂದು ಹೇಳಿದ್ದಾರೆ. ಈ ಹೇಳಿಕೆಯನ್ನು ಒಪ್ಪಬಹುದಾದರೂ ಪ್ರಥಮವಾಗಿ 'ಕದಡಿದ ನೀರು' ಸ್ವತಂತ್ರ ಕೃತಿಯೆಂದು ನಿರ್ವಿವಾದವಾಗಿ ಹೇಳುವುದಕ್ಕೆ ಆಗುತ್ತದೆಯೇ? ಡಾ॥ ದಿವಸ್ಪತಿ ಹೆಗಡೆಯವರು ಈ ನಾಟಕದ ಸಾಲು ಸಾಲುಗಳನ್ನೆಲ್ಲಾ ಕೂಲಂಕುಶವಾಗಿ ತಾಳೆ ನೋಡಿ 'ಕದಡಿದ ನೀರು' ಸೆಂಟ್‌ಜಾನ್ ಇರ್ವಿನ್‌ನ ನಾಟಕವಾದ 'ಜಾನ್ ಫರ್ಗ್ಯೂಸನ್' ದ ರೂಪಾಂತರ ಕೂಡಾ ಅಲ್ಲ. ಅದು ಅನುಮಾನವಿಲ್ಲದೆ ಅನುವಾದವೇ ಎಂದಿದ್ದಾರೆ. ನಾಟಕ ಕದಡಿದ ನೀರು ಮೂಲದೊಡನೆ ಹೋಲಿಸದಿದ್ದರೆ ಒಂದು ಉತ್ಕೃಷ್ಟ ಕೃತಿ. ರಂಗದ ಮೇಲೆ

ವಿಜೃಂಬಿಸಿದೆ. ಆದರೆ ಶ್ರೀಯವರ ಅಶ್ವತ್ಥಾಮನ್‌ಗೆ ಸಿಗದ ಸ್ಥಾನ ಕದಡಿದ ನೀರು ನಾಟಕಕ್ಕೆ ಸಿಕ್ಕುವುದು ವಿಪರ್ಯಾಸವೇ ಸರಿ.

ನಾಟಕ ಸಾಹಿತ್ಯ ಹಾಗೂ ರಂಗ ಪ್ರಯೋಗಗಳೆರಡನ್ನೂ ದೃಷ್ಟಿಯಲ್ಲಿಟ್ಟು ಈ ಸಂಕಲನವನ್ನು ಸಂಪಾದಿಸಿರುವರಾದರು ಒಟ್ಟಾರೆ ನಾಟಕಗಳ ಆಯ್ಕೆಯನ್ನು ಗಮನಿಸಿದಾಗ ಸಾಹಿತ್ಯಕ್ಕಿಂತ ಪ್ರಯೋಗಕ್ಕೆ ಹೆಚ್ಚು ಒತ್ತುಕೊಟ್ಟಿರುವುದು ಸ್ಪಷ್ಟವಾಗುತ್ತದೆ. ಆದರೆ ಸುಮಾರು 2-3 ದಶಕಗಳ ಕಾಲ ಹವ್ಯಾಸಿ ರಂಗಭೂಮಿಯನ್ನು ಜೀವಂತವಾಗಿ ಇಟ್ಟಿದ್ದ ಕೆಲವು ನಾಟಕಕಾರರಲ್ಲಿ ಪರ್ವತವಾಣಿಯವರು ಅಗ್ರಗಣ್ಯರು. ಕೈಲಾಸಂ ನಾಟಕದ ಉತ್ಕೃಷ್ಟತೆಯನ್ನು ಸಾರ್ವಜನಿಕವಾಗಿ ಗುರುತಿಸಿದರೂ ನಾಟಕದ ಕ್ಲಿಷ್ಟತೆಯಿಂದಾಗಿ ಅನೇಕ ತಂತ್ರಗಳು ಕೈ ನಾಟಕ ಪ್ರಯೋಗಕ್ಕೆ ಹೆಚ್ಚು ಉತ್ಸಾಹ ತೋರುತ್ತಿರಲಿಲ್ಲ. ಮಿಗಿಲಾಗಿ ಕೈಲಾಸಂ ನಂತರ, ಶ್ರೀರಂಗ, ಗಿರೀಶ್ ಕಾರ್ನಾಡ್ ಮತ್ತಿತ್ತರರು ಅವತರಿಸುವುದಕ್ಕೆ ಮುನ್ನ ಹವ್ಯಾಸಿಗಳು ಮೊರೆಹೋಗುತ್ತಿದ್ದ ನಾಟಕಕಾರರಲ್ಲಿ ಪರ್ವತವಾಣಿ ಅಗ್ರಗಣ್ಯರು. ಆದರೆ ಅವರ ಹೆಚ್ಚಿನ ನಾಟಕಗಳು ಇಂಗ್ಲೀಷ್, ಫ್ರೆಂಚ್, ರಷ್ಯನ್ ಮತ್ತಿತ್ತರ ಮೂಲ ಕೃತಿಗಳ ರೂಪಾಂತರಗಳನ್ನು ಇಡೀ ಜಗತ್ತಿಗೇ ಮೂಲ ನಾಟಕದ ಹೆಸರನ್ನು ತಿಳಿಸಿ ತಮ್ಮ ರೂಪಂತರಗಳನ್ನು ರಚಿಸಿದ ಪರ್ವತವಾಣಿಯವರ ಕೃತಿಗಳಲ್ಲಿ ನಮ್ಮ ನಾಡಿನ ಸಂಸ್ಕೃತಿ ಸಂಸ್ಕಾರಗಳು ಮೈವೆತ್ತಿವೆ. ಅವರ ನಾಟಕಗಳು ಅನುವಾದವಲ್ಲ. ಕೇವಲ ಹೆಸರುಗಳು ಹಾಗೂ ಸಂದರ್ಭಗಳನ್ನು ಬದಲಾಯಿಸಿ ಹೆಣೆದ ಕಥೆಯಲ್ಲ. ಸ್ವತಂತ್ರ ಕೃತಿಯಷ್ಟೇ ಅರ್ಥಪೂರ್ಣವಾಗಿ ನಮ್ಮ ನೆಲದ ವ್ಯಕ್ತಿಗಳ ಭಾವ ಭಾವನೆಗಳನ್ನು ಸೂಸಿ ಮೂಲದಲ್ಲೂ ಇಲ್ಲದ ಒಂದು ಸೊಬಗನ್ನು ಸೃಷ್ಟಿಸಿದ್ದಾರೆ. ಟೇಮಿಂಗ್ ಆಫ್ ದಿ ಶ್ರ್ಯೂ ಅನ್ನು ಅನುವಾದಿಸಿದರೆ ಸಿಗದ ರಸ 'ಬಹದ್ದೂರ್ ಗಂಡು'ವಿನಲ್ಲಿ ಕಾಣಬಹುದು. ಪಾಶ್ಚಾತ್ಯ ದಂಪತಿಗಳ ಛಾಯೆಯನ್ನು ಕಾಣದ ಈ ನಾಟಕದ ದಂಪತಿಗಳು ನಮ್ಮೊಳಗೊಬ್ಬರಾಗುತ್ತಾರೆ. ಇದೇ ತರದ ಸಂಪೂರ್ಣ ಕನ್ನಡೀಕರಣವಾಗಿರುವುದು ಉಂಡಾಡಿ ಗುಂಡ, ರಣಹದ್ದು ಮುಂತಾದ ನಾಟಕಗಳಲ್ಲಿ, ನಾಟಕಗಳ ಗುಣಮಟ್ಟವನ್ನೂ ಮೀರಿ ರಂಗಭೂಮಿಯ ಉಳಿವಿಗೆ ಪರ್ವತವಾಣಿಯವರ ನಾಟಕಗಳು 40ರಿಂದ 60ರ ದಶಕದವರೆವಿಗೆ ಅತ್ಯವಶ್ಯಕವಾಗಿದ್ದುವು. ಕನ್ನಡ ರಂಗಭೂಮಿಯ ಶತಮಾನದ ನಾಟಕವನ್ನು ಗುರುತಿಸುವಾಗ ಶತಮಾನದಲ್ಲಿ ಸುಮಾರು 2-3 ದಶಕಗಳ ಕಾಲ ಹಿಡಿದಿಟ್ಟಿದ್ದ ನಾಟಕಗಳನ್ನು ಕೈಬಿಡುವುದು ಉಚಿತವೇ? ಕೃತಿ ಚೌರ್ಯಕ್ಕೇ ಮನ್ನಣೆ ಕೊಟ್ಟು ಉತ್ಕೃಷ್ಟ ರೂಪಾಂತರಗಳಿಗೆ ಸಿಗದ ಸ್ಥಾನ ನಮ್ಮ ರಂಗ ಸಾಹಿತ್ಯ ಹಾಗೂ ರಂಗ ಪ್ರಯೋಗಗಳ ದೃಷ್ಟಿಯಿಂದ ದೌರ್ಭಾಗ್ಯವೇ ಸರಿ. ಅನೇಕ ನಾಟಕಗಳು ಸಂಕಲನದಲ್ಲಿ ಸೇರಿಲ್ಲವಾದರೂ ಸಂಪಾದಕರ ಪೀಠಿಕೆಯಲ್ಲಿ ಸಾಕಷ್ಟು ಪ್ರಮಾಣದಲ್ಲಿ ಚರ್ಚಿಸಲ್ಪಟ್ಟಿವೆ. ಆದರೆ ಪರ್ವತವಾಣಿಯವರ ನಾಟಕಗಳು ಕೇವಲ ನಮೂದಿಸಲ್ಪಟ್ಟಿವೆ.

ಭೌತಿಕ ಪರಿಮಿತಿಯ ಕಾರಣದಿಂದಾಗಿ ಹೆಚ್ಚಿನ ನಾಟಕಗಳು ಈ ಸಂಕಲನದಲ್ಲಿ ಆಯ್ಕೆಯಾಗಿಲ್ಲವೆಂದು ಸಂಪಾದಕರು ಪೀಠಿಕೆಯಲ್ಲಿ ತಿಳಿಸಿದ್ದಾರೆ. ಅಂತೆಯೇ ಒಬ್ಬ ಸಾಹಿತಿಯ ಒಂದೇ ನಾಟಕವನ್ನು ಸೇರಿಸಿಕೊಂಡಿರುವುದಕ್ಕೆ ಕಾರಣ ಸಂಕಲನದ ಪ್ರಾತಿನಿಧಿಕ ಸ್ವರೂಪವನ್ನು ಕಾಯ್ದುಕೊಳ್ಳುವುದಕ್ಕೆಂದು ಸಹ ಸ್ಪಷ್ಟನೆ ನೀಡಿದ್ದಾರೆ. ಯಾವುದೇ ಒಂದು

ದೇಶ, ಭಾಷೆ, ಸಂಸ್ಕೃತಿಯ ಶತಮಾನದ ಉತ್ಕೃಷ್ಟತೆಯನ್ನು ಗುರುತಿಸುವಾಗ ಇಂತಹ ಭೌತಿಕ ಪರಿಮಿತಿಗಳು ಅನಪೇಕ್ಷಿತ. ನಮ್ಮ ಭಾಷೆ, ಸಂಸ್ಕೃತಿ ಶ್ರೀಮಂತವಾಗಿರಬೇಕು. ಆ ಶ್ರೀಮಂತಿಕೆಯನ್ನು ಗುರುತಿಸುವಾಗ ಕೃಪಣತೆ ಅನಪೇಕ್ಷಿತ. ಇಂತಹ ಪರಿಮಿತಿಗಳಿದ್ದರೆ ಸಂಕಲನವನ್ನೇ ಬೇಕಾದರೂ ಕೈಬಿಡಬಹುದು. ಆದರೆ ಅರ್ಹ ಕೃತಿಗಳನ್ನು ಗುರುತಿಸದಿರುವುದು ಅಕ್ಷಮ್ಯ. ಸಾರ್ವಜನಿಕ ಸಂಸ್ಥೆಯಲ್ಲೇ ಪರಿಮಿತಿಯಿರುವುದಾದರೆ ಖಾಸಗಿ ಸಂಸ್ಥೆಗಳ ಗತಿಯೇನು? ಈ ಪರಿಮಿತಿಯಿಲ್ಲದಿದ್ದಲ್ಲಿ ನಮ್ಮ ನಾಟಕ ಸಾಹಿತ್ಯವನ್ನು ಶ್ರೀಮಂತವಾಗಿಸಿದ ಕಾರಂತ, ಬೇಂದ್ರೆ, ಸಿ.ಕೆ. ವೆಂಕಟರಾಮಯ್ಯ, ಬಿ.ಎಂ.ಶ್ರೀ, ಎಂ.ಆರ್.ಶ್ರೀ., ಪರ್ವತವಾಣಿ ಇಂತಹ ಮಹನೀಯರ ಕೊಡುಗೆಗಳನ್ನು ಕನ್ನಡ ಜನತೆ ಅವಲೋಕಿಸಬಹುದಿತ್ತು.



## ಚಂದಾದಾರರಲ್ಲಿ ಒಂದು ಮಾತು

ಎಂ.ಓ. ಮೂಲಕ ಚಂದಾ ಕಳುಹಿಸುವವರು ಕೌಂಟರ್ ಫಾಯಿಲ್‌ನಲ್ಲಿ ತಪ್ಪದೇ ನಿಮ್ಮ ವಿಳಾಸ ಬರೆಯಿರಿ, ಹೊರ ಊರಿನ ಚೆಕ್ ಕಳುಹಿಸುವವರು ರೂ. ೨೦/- ಹೆಚ್ಚಿಗೆ ಕಳುಹಿಸಿ. 'ಸಂಚಯ' ಎನ್ನುವ ಹೆಸರಿಗೇ ನಿಮ್ಮ ಚೆಕ್ ಡಿ.ಡಿ. ಕಳುಹಿಸಬಹುದು.

ನಿಮ್ಮ ವಿಳಾಸ ಬದಲಾದಲ್ಲಿ ದಯವಿಟ್ಟು ಒಂದು ಕಾರ್ಡು ಹಾಕಿ. ನಮ್ಮ ಸಮಯ ಶ್ರಮ ಸುರಿದು ರೂಪಿಸಿದ ಪತ್ರಿಕೆಯ ಪ್ರತಿಗಳು ವ್ಯರ್ಥ ವಾಪಸ್ಸಾಗುವುದು, ಬೇಡದ ಜಾಗಗಳಲ್ಲಿ ಕೊಳೆಯುವುದು ಬೇಡ.

ಪುಸ್ತಕ ವಿಮರ್ಶೆ/ಪರಿಚಯಕ್ಕೆ ಸಾಧ್ಯವಾದಲ್ಲಿ ಎರಡು ಪ್ರತಿ ಕಳುಹಿಸಿ.

ನಿಮ್ಮ ಸ್ನೇಹಿತರನ್ನು ಗೆಳೆಯರನ್ನು ಆಸಕ್ತಿ ಇರುವವರನ್ನು ಸಂಚಯಕ್ಕೆ ಚಂದಾದಾರರನ್ನಾಗಿ 'ಸಂಚಯ ಸ್ನೇಹವಲಯ' ವಿಸ್ತರಿಸಿ.

ನಿಮ್ಮ ಬರಹಗಳು ಮತ್ತು ಸಂಚಯ ಕುರಿತ ಅನಿಸಿಕೆ ಅಭಿಪ್ರಾಯಗಳಿಗೆ ಸ್ವಾಗತವಿದೆ.

# ಗೃಹಭಂಗ ಮತ್ತು ಮರಳಿಮಣ್ಣಿಗೆ



ಕೆ. ಸತ್ಯನಾರಾಯಣ

ಈ ಎರಡು ಪ್ರಸಿದ್ಧ ಕಾದಂಬರಿಗಳನ್ನು ಒಟ್ಟಿಗೇ ನೋಡಬೇಕಂಬ ನನ್ನ ಆಸೆಗೆ ಹಲವು ಕಾರಣಗಳಿವೆ. ಈ ಎಲ್ಲ ಕಾರಣಗಳು ತೀರಾ ಸಾಹಿತ್ಯಕವಲ್ಲ. 'ಗೃಹಭಂಗ' ಈಚೆಗೆ ಟೆಲಿವಿಶನ್‌ನಲ್ಲಿ ಧಾರಾವಾಹಿಯಾಗಿ ಬರುತ್ತಿರುವುದರಿಂದ ಮತ್ತಷ್ಟು ಜನಪ್ರಿಯತೆಯನ್ನು ಗಳಿಸಿಕೊಂಡಿದೆ. ನನ್ನ ಬಂಧುಗಳಲ್ಲೇ ಅನೇಕರು ಈ ಚಿತ್ರ ಮಾಲಿಕೆಯನ್ನು ನೋಡಿ ಮತ್ತೆ ಮತ್ತೆ ಕಾದಂಬರಿಯನ್ನು ಓದುತ್ತಿದ್ದಾರೆ. ಇಷ್ಟಪಡುತ್ತಿದ್ದಾರೆ. ಹೀಗೆ ಇಷ್ಟಪಡುವುದಕ್ಕೆ ಕಾರಣ ಈವತ್ತು ನಗರ ಪ್ರದೇಶಗಳಲ್ಲಿ ವಾಸಿಸುತ್ತಿರುವ ಬ್ರಾಹ್ಮಣ ಸಮುದಾಯದ ಪೂರ್ವಜರು ಎರಡು-ಮೂರು ತಲೆಮಾರುಗಳ ಹಿಂದೆ ಬಾಳಿ ಬದುಕಿದ ರೀತಿಯನ್ನು ಕಾದಂಬರಿ ಯಥಾವತ್ತಾಗಿ ಚಿತ್ರಿಸುತ್ತದೆ ಎನ್ನುವುದು ಒಂದು. ನಮಗೆಲ್ಲರಿಗೂ ನಾವು ಕಳೆದುಕೊಂಡ ನಮ್ಮ ಹಿರಿಯರು ಬದುಕಿದ ಕ್ರಮದ ಬಗ್ಗೆ ಕುತೂಹಲ ಗೌರವಗಳಿರುತ್ತವೆ. ಇಂತಹ ಕುತೂಹಲ ಗೌರವವನ್ನು ಪೋಷಿಸುವ ಪ್ರತಿನಿಧಿಸುವ ಕೃತಿಗಳು ನಮಗೆ ಆಪ್ತವಾಗುತ್ತವೆ. ಈಚೆಗೆ ನಾನೇ ಈ ಕಾದಂಬರಿಯನ್ನು ಓದಿದಾಗ ಸಾಹಿತ್ಯ ವಿಮರ್ಶೆಯ ದೃಷ್ಟಿಯಿಂದ ಅನೇಕ ಪ್ರಶ್ನೆಗಳನ್ನು ಎತ್ತಬಹುದು ಎನ್ನಿಸಿದರೂ ಓದುಗನಾಗಿ ನನಗೂ ಕೂಡ ಮೇಲೆ ಹೇಳಿದ ಕಾರಣಕ್ಕಾಗಿಯೇ ಈ ಕಾದಂಬರಿಯ ಓದು ಆತ್ಮೀಯವಾಗುತ್ತಿತ್ತು ಎಂಬುದನ್ನು ಕೂಡ ಹೇಳಬೇಕು. ಆದರೂ ಗೃಹಭಂಗ ತನ್ನೆಲ್ಲ ಜನಪ್ರಿಯತೆಯೊಡನೆಯು, ಮರಳಿಮಣ್ಣಿಗೆ ಕಾದಂಬರಿಯಂತೆ ಮತ್ತೆ ಮತ್ತೆ ಏಕೆ ನಮ್ಮ ಸಾಂಸ್ಕೃತಿಕ ವಾಗ್ವಾದದಲ್ಲಿ ಪ್ರಸ್ತಾಪಗೊಳ್ಳುವುದಿಲ್ಲ ಎಂಬ ಪ್ರಶ್ನೆಯೂ ಗಮನಿಸಬೇಕಾದ್ದೆ.

ನಮ್ಮ ಸಾಹಿತ್ಯ ವಲಯದಲ್ಲಿ ಕೂಡ ಬ್ರಾಹ್ಮಣ ಸಮಾಜವನ್ನು ವೈವಿಧ್ಯವಿಲ್ಲದ ಆಂತರಿಕ ವಿರೋಧಾಭಾಸಗಳಿಲ್ಲದ ಏಕತ್ರವಲಯವಾಗಿಯೇ ನೋಡುವ ಪರಿಪಾಠವೊಂದು ರೂಢಿಯಲ್ಲಿದೆ. ಈ ರೂಢಿಗೆ ಕಾಲಾನುಕ್ರಮದಲ್ಲಿ ಅಧಿಕೃತತೆಯ ಮತ್ತು ಪರಿಪೂರ್ಣತೆಯ ಕವಚವು ದಕ್ಕಿಬಿಟ್ಟಿದೆ. ಹೀಗಾಗಿ ವೈದಿಕ ದರ್ಶನ, ಜೀವನಕ್ರಮವನ್ನು ಪ್ರತಿನಿಧಿಸುವ, ಬದುಕುವ, ಎದುರಿಸುವ ಅನಂತಮೂರ್ತಿಯವರ ಕಥಾಸಾಹಿತ್ಯಕ್ಕೆ ಹೆಚ್ಚು ಪ್ರಾಶಸ್ತ್ಯ ಸಿಗುತ್ತದೆ. ಬ್ರಾಹ್ಮಣರ ಜೀವನ ಕ್ರಮವನ್ನು, ಚಿಂತನಪದ್ಧತಿಯನ್ನು ವಿರೋಧಿಸುತ್ತಾ, ತಿರಸ್ಕರಿಸುತ್ತಾ, ಇನ್ನಿಲ್ಲವೆನ್ನುತ್ತಾ ಹೊಸ ಸಾಂಸ್ಕೃತಿಕ ನೆಲೆಗಳನ್ನೂ ಹುಡುಕುತ್ತಿರುವ ಕೆಳವರ್ಗದ ಬರಹಗಾರರಿಗೂ ಪ್ರತಿನಿಧೀಕರಣವನ್ನು ಸೂಚಿಸುವಂತಹ ಬ್ರಾಹ್ಮಣ ಸಮುದಾಯವನ್ನು ಒಂದು Mono Cultural Unit ಆಗಿ ನೋಡುವಂತಹ ಕಥಾಸಾಹಿತ್ಯವೇ ಮುಖ್ಯವಾಗ ಬಹುದು. ಆದರೆ ಸಾಹಿತ್ಯದ ರಾಜಕಾರಣವೇ ಅಂತಿಮ ಸತ್ಯವೇನಲ್ಲ. ಏಕೆಂದರೆ ಮನುಷ್ಯರು

ಸಂಸ್ಕೃತಿಯ ಪ್ರತಿನಿಧಿ, ಪ್ರತೀಕಗಳು ಮಾತ್ರವಾಗಿರದೆ, ವ್ಯಕ್ತಿಗಳಾಗಿಯೂ ಬದುಕನ್ನೂ ಎದುರಿಸುತ್ತಿರುತ್ತಾರೆ. ಸಾಹಿತ್ಯವು ಮನುಷ್ಯನನ್ನು ಸಮಾಜದ ಒಂದು ಘಟಕವನ್ನಾಗಿ ಮಾತ್ರ ನೋಡದೆ, ಆತನನ್ನು ವೈಯಕ್ತಿಕ ಸ್ತರದಲ್ಲೂ ನೋಡಬೇಕಾಗುತ್ತದೆ. ಎಲ್ಲ ಕಾಲದಲ್ಲು ಪ್ರತಿನಿಧೀಕರಣಕ್ಕೆ ಪಕ್ಕಾಗದೆ ತಮ್ಮ ತಮ್ಮ ಜೀವನವನ್ನು ತಮ್ಮ ತಮ್ಮ ಮಿತಿಯಲ್ಲೇ ನಡೆಸಿಕೊಂಡು ಹೋಗುವವರ ಸಂಖ್ಯೆಯೇ ಬಹುಪಾಲು ಇರುತ್ತದೆ. ಇಂತಹ ವರ್ಗದ ಒಂದು ಬದುಕನ್ನು ಗೃಹಭಂಗ ಚಿತ್ರಿಸುತ್ತದೆ.

☼ ☼ ☼

ಹಳೆ ಮೈಸೂರಿನ ಅನೇಕ ಭಾಗಗಳಲ್ಲಿ ಬ್ರಾಹ್ಮಣರಾಗಿದ್ದು ವೈದಿಕ ಜೀವನ ಪದ್ಧತಿಯ ಅರಿವಿಲ್ಲದೆ-ಸೋಂಕಿಲ್ಲದೆ, ಕೃಷಿಕರಾಗಿಯೋ, ಸಣ್ಣಪುಟ್ಟ ತಾಪೇದಾರರಾಗಿಯೋ, ಆಧುನಿಕ ಅಥವಾ ಪಾರಂಪರಿಕ ವಿದ್ಯಾಭ್ಯಾಸದ ಸೋಂಕಿಲ್ಲದ, ಪ್ರಭಾವವಿಲ್ಲದೆ ಬದುಕಿದ ಜನಸಮುದಾಯದ ಬದುಕು ಕೂಡ ಒಂದಿದೆ. ಅದನ್ನು ಗೃಹಭಂಗ ಚಿತ್ರಿಸುತ್ತದೆ. ಈ ಕಾರಣಕ್ಕಾಗಿ ಈ ಹಿನ್ನೆಲೆಯಿಂದ ಬಂದವರಿಗೆ ಈ ಕೃತಿ ರುಚಿಸುತ್ತದೆ. ವ್ಯಕ್ತಿಯ ಸ್ವಭಾವ ಮತ್ತು ಚರಿತ್ರ್ಯದ ನಿರ್ಮಾಣಕ್ಕೆ ಸಂಬಂಧಿಸದಂತೆ ಸಾಂಸ್ಕೃತಿಕ ಅಂಶಗಳು ಎಷ್ಟು ಮುಖ್ಯ. ಅಮುಖ್ಯ ಎಂಬ ಪ್ರಶ್ನೆಗೆ ಸಂಬಂಧಪಟ್ಟಂತೆ ತೀರಾ ಪ್ರವೃತ್ತಿ ಮತ್ತು ತೆವಲುಗಳ ಸ್ತರದಲ್ಲಿ ಬದುಕುವ ಗೃಹಭಂಗದ ಪಾತ್ರಗಳು ಹೊಸಬೆಳಕು ಚೆಲ್ಲಬಲ್ಲವು. ರೂಢಿಯಲ್ಲಿರುವ ಸಮಾಜಶಾಸ್ತ್ರೀಯ ಕಲ್ಪನೆಗೆ ಹೊಸ ಆಯಾಮ ಸೇರಿಸಬಲ್ಲವು. ಗೃಹಭಂಗವನ್ನು ಓದಿರುವ ಮತ್ತು ಮೆಚ್ಚಿಯೂ ಇರುವ ಕನ್ನಡದ ಪ್ರಸಿದ್ಧ ಕಾದಂಬರಿಕಾರರೊಬ್ಬರು ನನ್ನ ಹತ್ತಿರ ಮಾತನಾಡುತ್ತಿದ್ದಾಗ 'ಬ್ರಾಹ್ಮಣರಲ್ಲಿ ಈ ರೀತಿ ಬೈಗುಳ, ಮಾತುಕತೆ ವಾಸ್ತವವೆ' ಎಂದು ಆಶ್ಚರ್ಯ ವ್ಯಕ್ತಪಡಿಸಿದ್ದರು.

ನನ್ನ ಮುಖ್ಯ ಪ್ರಶ್ನೆ ಇದಲ್ಲ. ಅನುಭವ ಮತ್ತು ವಾಸ್ತವ ಕಲಾಕೃತಿಯೊಳಗೆ ಹೇಗೆ ಬರಬೇಕು ಎಂಬುದು? ಭೈರಪ್ಪನವರ ಅನುಭವನಿಷ್ಠೆ ಅಸಾಧಾರಣವಾದದ್ದು. ಇಲ್ಲಿಯ ಪಾತ್ರಗಳೂ ಘಟನೆಗಳು ನಿಜಜೀವನದಿಂದಲೇ ಅದೆಷ್ಟು ಕರಾರುವಾಕ್ಕಾಗಿ ಮಾಡಿ ಬಂದಿದೆಯೆಂದರೆ ಇಲ್ಲಿಯ ಕಥನವನ್ನು ಓದುವಾಗ 1920-45ರ ನಡುವೆ ಕಥನ ನಡೆದ ಚನ್ನರಾಯಪಟ್ಟಣ, ತಿಪಟೂರು ಸೀಮೆಯಲ್ಲಿ ಈ ಪಾತ್ರಗಳಲ್ಲದೆ ಬೇರೆ ಯಾರೂ ಬದುಕಿ ಬಾಳಿರಲಾರರು ಎಂದು ಕೂಡ ನಾವು ಊಹಿಸಲಾರೆವು, ತಿಳಿಯಲಾರೆವು.

ಬದಲಾಗುತ್ತಿರುವ ಸಾಹಿತ್ಯ ಚಿಂತನೆಯ ಪ್ರಕಾರ ಸಾಹಿತ್ಯಕೃತಿ ಹೇಳುವುದಷ್ಟಕ್ಕೆ ಮಾತ್ರವೇ ಮಹತ್ವವಿಲ್ಲ. ಈ ಚಿಂತನಕ್ರಮ ಅದರ ಮೌನವನ್ನು ಕೂಡ ಪ್ರಶ್ನಿಸುತ್ತದೆ. ಕಾರಣಗಳನ್ನು ಹುಡುಕುತ್ತದೆ. ಹೀಗೆ ಪ್ರಶ್ನೆ ಕೇಳುತ್ತಾ ಕೆದಕುತ್ತಾ ಸಾಹಿತ್ಯ ಕೃತಿ, ಕಲಾಕೃತಿ ಒಂದು ಕಾಲದ ಪರಿಪೂರ್ಣ ಅಭಿವ್ಯಕ್ತಿಯಾಗಿರುತ್ತದೆ ಅನ್ನುವ ಕಲ್ಪನೆಯನ್ನು ನಿರಾಕರಿಸುತ್ತದೆ.

ಆದರೆ ಈ ಕಾದಂಬರಿಯ ಜಗತ್ತು, ಅನುಭವ ಅದೆಷ್ಟು ಸ್ವಯಂಪೂರ್ಣವಾಗಿದೆಯೆಂದರೆ ಇದಕ್ಕೆ ಹೊರಜಗತ್ತಿನ ಅರಿವಾಗಲೀ ಅವಶ್ಯಕತೆಯಾಗಲೀ ಇದೆಯೆಂದೆನಿಸುವುದಿಲ್ಲ. ಕಾದಂಬರಿಯ ನಾಯಕಿ ನಂಜಮ್ಮ ಕೊನೆಯಲ್ಲಿ ಶೃಂಗೇರಿಗೆ ಹೋದರೂ ಅದು ಅವಳ ಒಳಜಗತ್ತಿಗೆ, ಅದರ ಸಮಾಧಾನಕ್ಕೆ ಸಂಬಂಧಿಸಿದ ಪಯಣ. ತನ್ನ ಕಾಲದ ಚರಿತ್ರೆಯೊಡನೆ,

ಆಧುನಿಕತೆಯೊಡನೆ ಇಲ್ಲಿಯ ಕಥನಕ್ಕೆ ಮುಖಾಮುಖಿಯಾಗಲು ಆಸಕ್ತಿ ಇದ್ದಂತಿಲ್ಲ. ಸ್ವಾತಂತ್ರ್ಯ ಚಳುವಳಿಯ ಪ್ರಸ್ತಾಪ ಈ ಕೃತಿಯಲ್ಲು, ಇದರ ಮುಂದಿನ ಭಾಗದಲ್ಲಿ ಬಂದರೂ ಅದು ಪ್ರಾಸಂಗಿಕ. ಇಲ್ಲಿಯ ಪಾತ್ರಗಳಿಗೆ ಚರಿತ್ರೆಯ ಗೊಡವೆಯೂ ಇಲ್ಲ, ಹಂಗೂ ಇಲ್ಲ. ತಮ್ಮ ತಮ್ಮ ಮಿತಿಯಲ್ಲೇ, ಪ್ರವೃತ್ತಿಗಳ ಸ್ತರದಲ್ಲೇ ತಮ್ಮ ಜೀವನದ ಅರ್ಥ ಸಾಧ್ಯತೆಗಳನ್ನು ಹುಡುಕುತ್ತವೆ ಮತ್ತು ನಿರಾಕರಿಸುತ್ತವೆ.

ಎ.ಎನ್. ವಿಲ್ಸನ್ ಎಂಬ ಸಾಹಿತ್ಯ ಚಿಂತಕರ ಪ್ರಕಾರ ಎಲ್ಲ ಕಾಲದಲ್ಲು ಬಹುಪಾಲು ಜನ ಹೀಗೆ ಬದುಕುತ್ತಾರೇನೋ? ಆದರೆ ಸಾಹಿತ್ಯ ಕೃತಿಯೊಳಗೆ ಇಂತಹ ಅನುಭವ ಹೇಗೆ ಬರಬೇಕು?

ಕಾರಂತರ 'ಮರಳಿಮಣ್ಣಿಗೆ' ನೋಡೋಣ. ಗೃಹಭಂಗದಂತೆ ಈ ಕಾದಂಬರಿ ಕೂಡ ಎರಡು ಮೂರು ತಲೆಮಾರುಗಳ ಕತೆಯನ್ನೊಳಗೊಂಡಿದ್ದರೂ, ಕಾಲದ ಹರವು ದೊಡ್ಡದು. ಗೃಹಭಂಗ ಚಿತ್ರಿಸುವ 1920-40ರ ಕಾಲಾವಧಿ ಮರಳಿ ಮಣ್ಣಿಗೆಯ ಕಥನದ ಕಾಲಾವಧಿಯ ಭಾಗವೂ ಹೌದು, ಬ್ರಾಹ್ಮಣ ಸಮಾಜದ ಬಡತನ, ದೈನಿಕ ಬವಣೆಯ ವಿವರಗಳಲ್ಲಿ ಎರಡೂ ಕೃತಿಗಳಲ್ಲು ಸಾಮ್ಯತೆಯಿದೆ. ನಂಜಮ್ಮ, ಪಾರೋತಿ, ಸರಸೋತಿ ಕನ್ನಡ ಓದುಗರಿಗೆ ಪ್ರಿಯವಾದ ಹೆಂಗಸಿನ ಆರ್ಕಿಟೈಪ್‌ಗಳು ಭೈರಪ್ಪನವರ ಚನ್ನಿಗರಾಯ ಕಾರಂತರಲ್ಲಿ ವಿದ್ಯಾವಂತ ಲಚ್ಚನಾಗುತ್ತಾನೆ. ಕಾರಂತರ ಅನುಭವನಿಷ್ಠೆ ಪ್ರಾಮಾಣಿಕತೆ ಕೂಡ ಪ್ರಶ್ನಾತೀತವಾದ್ದೆ. ಆದರೂ ಮರಳಿಮಣ್ಣಿಗೆ ಚಿತ್ರಿಸುವ ಕಥನ- ಸಮಾಜ- ಬದುಕು ತನ್ನಷ್ಟಕ್ಕೆ ತಾನು ಮಾತ್ರ ನಿಲ್ಲದೆ ಚರಿತ್ರೆಯ ಗತಿಯ ಜೊತೆ ಆಧುನಿಕತೆಯ ವಿನ್ಯಾಸದ ಜೊತೆ ತಳುಕು ಹಾಕಿಕೊಂಡಿದೆ. ಇದಕ್ಕೆ ಕಾರಣಗಳನ್ನು ಈ ಇಬ್ಬರು ಲೇಖಕರ ಸೃಜನಶೀಲತೆಯ ಸ್ವರೂಪದಲ್ಲೇ ಹುಡುಕಬೇಕು.

ಕಥನವನ್ನು ಬೆಳೆಸುವಲ್ಲಿ ಭೈರಪ್ಪನವರು ಕಲ್ಪನೆ, ಸೃಜನಶೀಲತೆಗಿಂತ ಹೆಚ್ಚಾಗಿ ತಮ್ಮ ಬಾಲ್ಯದ ಗಾಢವಾದ ನೆನಪುಗಳನ್ನು ನೆಚ್ಚಿಕೊಂಡಿದ್ದಾರೆ. ಹೀಗಾಗಿ ಕಾದಂಬರಿಯ ಘಟನಾವಳಿಗಳೆಲ್ಲ ನಿಜಜೀವನಕ್ಕೆ ಹತ್ತಿರವಾಗಿವೆ. ಆ ಕಾರಣಕ್ಕೇ ಮನಸ್ಸನ್ನು ಆವರಿಸುತ್ತವೆ, ಆದರೆ ಒಂದು ಸೃಜನಶೀಲ ಕೃತಿಯೊಳಗೆ ಲೇಖಕನ ಎಲ್ಲ ಅನುಭವಗಳು, ಘಟನಾವಳಿಗಳು ಹಾಗೆಯೇ ಮೂಡಿಬರಬೇಕೆ? ಲೇಖಕನ ಪ್ರತಿಭೆ, ಕಲ್ಪನೆಯ ಮೂಸೆಯಲ್ಲಿ ಅವು ಪರಿವರ್ತನೆಗೊಳ್ಳಲೇ ಬೇಕಲ್ಲವೆ? ಸೃಜನಶೀಲತೆ, ಕಲ್ಪಕತೆ ಅನುಭವದ ಪಥ್ಯವನ್ನು ಸಂಪಾದಿಸುತ್ತದೆ, ಕ್ರೋಢೀಕರಿಸುತ್ತದೆ. ಹೊಸಪ್ರಭೆಯಿಂದ ಬೆಳಗುವಂತೆ ಮಾಡುತ್ತದೆ. ಇದಾಗದೇ ಹೋದರೆ ಗೃಹಭಂಗದಲ್ಲಾಗಿರುವಂತೆ ಪ್ಲೇಗು, ಸಾವುಗಳು, ಘಟನಾವಳಿಗಳು ಪುನರಾವರ್ತನೆಯಾಗುತ್ತಲೇ ಇರುತ್ತದೆ. ಪಾತ್ರಗಳು ಅವು ಇರುವ ಸ್ಥಿತಿಯಲ್ಲೇ ಇರುತ್ತವೆ. ಹೀಗಿದ್ದೂ ಇದೆಲ್ಲದರ ನಿರೂಪಣೆ ಎಷ್ಟು ಗಾಢವಾಗಿದೆಯೆಂದರೆ ಮೊದಮೊದಲು ಇದನ್ನೆಲ್ಲ ನಾವು ಓದುವಾಗ, ಕರಗುತ್ತೇವೆ, ಮರುಗುತ್ತೇವೆ. ಮತ್ತೆ ಮತ್ತೆ ಇದೇ ಘಟನೆಗಳು ಪುನರಾವರ್ತನೆಯಾದಾಗ ನಮ್ಮಲ್ಲಿ ಯಾವ ರೀತಿಯ ಭಾವನೆಗಳೂ ಮೂಡುವುದಿಲ್ಲ. ಅಂದರೆ ನಿಜ ಜೀವನದ ಕಷ್ಟಗಳನ್ನು ನೀವು ಅದೆಷ್ಟೇ ಪ್ರಾಮಾಣಿಕವಾಗಿ ವರ್ಣಿಸಿದರೂ

ಮೇಲೆ ಹೇಳಿದ ಕಾರಣಕ್ಕೆ ಅದು ಓದುಗನಲ್ಲಿ ಒಂದು ಹಂತದ ನಂತರ ಯಾವ ಸ್ಪಂದನವನ್ನೂ ಮೂಡಿಸದೆ ಹೋಗಬಹುದು. ಓದುಗನೆ ಸ್ಪಂದನಶೀಲತೆಯನ್ನು ಚಲನಶೀಲವಾಗಿಡಲು ಕಥನದ ಅನುಭವಕ್ಕೆ ಸೃಜನಶೀಲತೆಯ, ಕಲ್ಪಕತೆಯ ಮೆರಗು ಬೇಕೇ ಬೇಕಾಗುತ್ತದೆ.

ಆಮೇಲೆ ಕಾದಂಬರಿಯೊಳಗಿನ ಅನುಭವ ಜಗತ್ತು ಎಷ್ಟೇ ಸ್ವಯಂಪೂರ್ಣವಾಗಿದ್ದರೂ ಅದನ್ನು ಮೀರಿದ ವಿಶಾಲವಾದ ಜಗತ್ತೊಂದು ಅದರ ನಿರ್ದಿಷ್ಟ ಕಾಲ ಸ್ಥಳ- ಸಂದರ್ಭದ ಚೌಕಟ್ಟು ಕೂಡ ಒಂದಿರುತ್ತದೆ.ಕಥನ ಪ್ರಜ್ಞಾಪೂರ್ವಕವಾಗಿಯೋ, ಅಪ್ರಜ್ಞಾಪೂರ್ವಕ ವಾಗಿಯೋ ಈ ವಿಶಾಲ ಜಗತ್ತು ಮತ್ತು ಅದರ ಚೌಕಟ್ಟನೊಡನೆ ಸಂಬಂಧ ಸ್ಥಾಪಿಸಿಕೊಳ್ಳ ಬೇಕಾಗುತ್ತದೆ. ಮುಖಾಮುಖಿಯಾಗಬೇಕಾಗುತ್ತದೆ. ಮತ್ತು ಮನುಷ್ಯ ಜಗತ್ತಿನ ಎಲ್ಲ ವ್ಯಾಪಾರಗಳು ಪ್ರಕೃತಿ- ಆಕಾಶ- ಭೂಮಿಗಳ ಅನಂತತೆಯ, ವ್ಯಾಪ್ತಿಯಲ್ಲಿ ವ್ಯಾಖ್ಯೆಯಲ್ಲಿ ಸಂಭವಿಸುತ್ತಿರುತ್ತೆ. ಗೃಹಭಂಗದಲ್ಲಿ ಪ್ರಕೃತಿ ಇಲ್ಲವೇ ಇಲ್ಲವೆನ್ನುವಷ್ಟು ಗೈರುಹಾಜರಾಗಿದೆ. ಮಲೆನಾಡು, ಕರಾವಳಿಯ ಪ್ರಕೃತಿಯಂತೆಯಲ್ಲದಿದ್ದರು ಬಯಲು ಸೀಮೆಯ ಪ್ರಕೃತಿಗು ತನ್ನದೇ ಆದ ಒಂದು ವೈಶಿಷ್ಟವಿದೆ. ಇದನ್ನು ನಾನು ಕಾದಂಬರಿಯಲ್ಲಿ ಹುಡುಕಿದೆ.

ಇಷ್ಟು ಹೇಳಿದ ಮೇಲೆ ನಾನು ಮರಳಿ ಮಣ್ಣಿಗೆ ಬಗ್ಗೆ ಏನು ಹೇಳಬಹುದು ಎಂದು ಯಾರಾದರೂ ಊಹಿಸಬಹುದು. ಕಾರಂತರು ಕೂಡ ಭೈರಪ್ಪನವರು ಆರಿಸಿಕೊಂಡಿರುವ ಜನಸಮುದಾಯದಿಂದಲೇ ಪಾತ್ರಗಳನ್ನು, ಕಥನದ ಎಳೆಗಳನ್ನು ಆಯ್ದಿದ್ದಾರೆ. ಅದೇ ಬಡತನ, ಅದೇ ಬವಣೆ, ಅದೇ ಪುರುಷ ದಬ್ಬಾಳಿಕೆ. ಅವರು ಕೂಡ ಅನುಭವನಿಷ್ಠರೇ ಆದರೆ ಇಲ್ಲಿಯ ನಿಜಜೀವನದ ಅನುಭವ, ಘಟನೆಗಳೆಲ್ಲ ಕಾದಂಬರಿ ನಿರ್ಮಿಸುವ ಜಗತ್ತಿಗಾಗಿ ತಮ್ಮ ನಿಜಜೀವನದ ಹಂಗನ್ನು, ವಾಸ್ತವದ ಕವಚವನ್ನು ಕಳೆದುಕೊಂಡು ಸ್ವತಂತ್ರವಾಗಿದೆ. ಈ ಸ್ವಾತಂತ್ರ್ಯದಿಂದಾಗಿ ಕಥನ ಉತ್ತರೋತ್ತರ ಬೆಳೆಯುತ್ತಾ ಹೋಗುವುದು ಮಾತ್ರವಲ್ಲ, ಕಥನವು ನಿಜಜೀವನದ ತರ್ಕವನ್ನು ನಿಯಮವನ್ನು ಮೀರಿದ ಹೊಸತರ್ಕ ನಿಯಮವೊಂದನ್ನು ರೂಪಿಸಿಕೊಂಡು ಕಥನವನ್ನು ಮೀರಿ ಚರಿತ್ರೆ, ಪ್ರಕೃತಿಯೊಡನೆ ಸಂಬಂಧವನ್ನು ಸ್ಥಾಪಿಸಿಕೊಳ್ಳಲು ಹವಣಿಸುತ್ತದೆ. ವಾಸ್ತವಾದಿ ಕಾದಂಬರಿಯ ವಾಸ್ತವ ಕೂಡ ನಿಜಜೀವನದ ವಾಸ್ತವವಲ್ಲ. ನಿಜಜೀವನದ ವಾಸ್ತವದಿಂದ ಕಡ ಪಡೆದು ಲೇಖಕ ಕಾದಂಬರಿಯಲ್ಲಿ ಹೊಸ 'ವಾಸ್ತವ ಸೃಷ್ಟಿಸುತ್ತಾನೆ. ಹೀಗೆ ಸೃಷ್ಟಿಸಿದ ಹೊಸ ವಾಸ್ತವವನ್ನು ಪರಿಶೀಲಿಸುವುದೆಂದರೆ, ನಿಜಜೀವನದ ನಮ್ಮ ವಾಸ್ತವದ ಸಾಧ್ಯಾಸಾಧ್ಯತೆಗಳನ್ನು ಪರಿಶೀಲಿಸಿದಂತೆಯೇ ಹಾಗಾಗಿ ಮರಳಿಮಣ್ಣಿಗೆ ನಮ್ಮ ಸಮಕಾಲೀನ ನಾಗರೀಕತೆಯ ಬಗ್ಗೆ ಆಧುನಿಕತೆ ತಂದ ಪಲ್ಲಟಗಳ ಬಗ್ಗೆ ಮತ್ತೆ ಮತ್ತೆ ಚರ್ಚೆಗೆ ಬರುತ್ತಲೇ ಇರುತ್ತದೆ. ಸಾರಾಂಶವೆಂದರೆ ಗೃಹಭಂಗ ನಿಜಜೀವನದ ವಾಸ್ತವಕ್ಕೆ ಗಂಟುಬಿದ್ದು ಕಾದಂಬರಿಯೊಳಗೆ ಸೃಷ್ಟಿಸಬಹುದಾದ ಹೊಸ ವಾಸ್ತವದ ಸಾಧ್ಯತೆಯನ್ನು ಕಳಕೊಂಡುಬಿಟ್ಟಿದೆ. ಮನುಷ್ಯ ಲೋಕದ ಎಲ್ಲ ಅನುಭವಗಳಿಗು, ಸೃಜನಶೀಲತೆ, ಕಲ್ಪಕತೆಯ ನೆರವಿನಿಂದ ಕಲಾಕೃತಿಯಲ್ಲಿ ಹೊಸವಾಸ್ತವವೊಂದನ್ನು ಸೃಷ್ಟಿಸುವ ಚೈತನ್ಯಶೀಲತೆಯಿರುತ್ತದೆ. ಹೀಗಾಗಿ ಗೃಹಭಂಗ ಸಮರ್ಥವಾಗಿ ಚಿತ್ರಿಸುವ ಅನುಭವದಿಂದ ಕಡಪಡೆದು ಕಾದಂಬರಿಯೊಳಗೆ ಸೃಷ್ಟಿಸಬಹುದಾಗಿದ್ದ ವಾಸ್ತವದಿಂದ ಕನ್ನಡ ಓದುಗರು

ವಂಚಿತರಾದರೆನಿಸುತ್ತದೆ. ಅಷ್ಟರಮಟ್ಟಿಗೆ ಕನ್ನಡ ಓದುಗರ ಸಂವೇದನೆಯು ಬಡವಾದಂತೆಯೇ ಸರಿ. ಹೀಗೊಂದು ಹೊಸ ವಾಸ್ತವವನ್ನೂ ಸೃಷ್ಟಿಸುವುದರತ್ತ ಕಾದಂಬರಿ ಗಮನ ಕೊಡದೆ ಇರುವುದರಿಂದಲೇ ತನ್ನೆಲ್ಲ ಅಸಾಧಾರಣ ಅನುಭವನಿಷ್ಠೆ, ಗಾಢವಾದ ನಿರೂಪಣೆ, ಮನಕಲುಕುವ ಘಟನಾವಳಿಗಳ ನಡುವೆಯೂ ಗೃಹಭಂಗ, ಮರಳಿಮಣ್ಣಿಗೆಯಂತ ಕೃತಿಗಳು ಮತ್ತೆ ಮತ್ತೆ ಎತ್ತುವ ಹಾಗೆ ಸಾಂಸ್ಕೃತಿಕ ಪ್ರಶ್ನೆಗಳನ್ನ ಎತ್ತುತ್ತಿಲ್ಲ. ತನ್ನೆಲ್ಲ ಜನಪ್ರಿಯತೆಯೊಡನೆಯೂ ಮರಳಿ ಮಣ್ಣಿಗೆಯ ಹಾಗೆ ನಮ್ಮ ಸಾಂಸ್ಕೃತಿಕ ವಾಗ್ವಾದದಲ್ಲಿ ಉಳಿದಿಲ್ಲ.

ಟಿಪ್ಪಣಿಗಳು

1. ನಾವು ನಿಜಜೀವನದ ಯಥಾವತ್ತಾದ ಅನುಭವದ ವರ್ಣನೆಗೇ ಗಂಟುಬಿದ್ದು ಬಿಟ್ಟರೆ ಪಾತ್ರಗಳು ತಾವು ಇರುವ ಸ್ಥಿತಿಯಲ್ಲೇ ಚಪ್ಪಟೆಯಾಗಿ ಉಳಿದುಬಿಡುತ್ತವೆ. ದುಂಡಗೆ, ಪೂರ್ಣವಾಗಿ ಅರಳುವುದಿಲ್ಲ. ಗೃಹಭಂಗದ ಬಹುತೇಕ ಪಾತ್ರಗಳಿಗೆ ಹೀಗಾಗಿದೆ. ಒಳ್ಳೆಯ ಕಥನವೊಂದರಲ್ಲಿ ಸ್ಥಿತಿ, ಸಾಧ್ಯತೆ, ಸ್ವಾತಂತ್ರ್ಯ ಬಿಡುಗಡೆಯ ಸ್ತರಗಳ ನಡುವೆ ನಿರಂತರ ಸಂಕರ್ಷವಿರುತ್ತದೆ. ಸ್ಥಿತಿಗೆ ಗಂಟು ಬೀಳುವ ಕಥನ, ಪಾತ್ರಗಳಿಗೆ ಸ್ವಾತಂತ್ರ್ಯವನ್ನು ನೀಡುವುದಿಲ್ಲ. ಮಾತ್ರವಲ್ಲ ಕಥನದ, ಓದುಗರ ಸ್ವಾತಂತ್ರ್ಯವನ್ನು ಕೂಡ ಮೊಟಕು ಗೊಳಿಸುತ್ತದೆ.
2. ನಮ್ಮ ಬಹುತೇಕ ಜನಪ್ರಿಯ ಕಥನಗಳು ಇದರಲ್ಲಿ ಗಂಭಿರ, ಒಳ್ಳೆಯ ಬರಹಗಾರರು ಸೇರುತ್ತಾರೆ. ಸುದ್ದಿ ಮಾಧ್ಯಮ, ದೃಶ್ಯಮಾಧ್ಯಮಗಳು ಚಿತ್ರಿಸುವ ಕಥನ ವಾಸ್ತವದ ತದ್ರೂಪು ಚಿತ್ರಣಕ್ಕೆ ಮರುಸೃಷ್ಟಿಗೆ ಮಾತ್ರವೇ ಮೀಸಲಾಗಿರುವುದರಿಂದ ಓದುಗನ ಮೇಲೆ ಯಾವ ಪ್ರಭಾವವನ್ನು ಬೀರುವುದಿಲ್ಲ. ಓದುವ ಮುಂಚೆ ನಾವು ಹೇಗಿದ್ದೆವೋ, ಓದಿನ ನಂತರವು ಹಾಗೇ ಇರುತ್ತೇವೆ. ನಮ್ಮ ಅಂತರಂಗದ ಸಮಯವನ್ನು ಇಂತಹ ಕಥನಗಳು ಪೋಲು ಮಾಡುತ್ತದೆ ಅನ್ನುವುದನ್ನು ಬಿಟ್ಟರೆ ಒಟ್ಟು ಪರಿಣಾಮದ ದೃಷ್ಟಿಯಿಂದ ಇಂತಹ ಕಥನಗಳನ್ನು ನಿರುಪದ್ರವಿ, ನಿರುಪಯುಕ್ತ ಎಂದೇ ಭಾವಿಸಬಹುದು.
3. ಮರಳಿ ಮಣ್ಣಿಗೆ ಕಾದಂಬರಿ ನಿಜ ಜೀವನದ ಅನುಭವವನ್ನು ಕೇವಲ Launching Pad ಆಗಿ ಮಾತ್ರ ಉಪಯೋಗಿಸಿಕೊಳ್ಳುತ್ತದೆ. ಅಂದರೆ ಕಾದಂಬರಿ ಕತೆಯಿಂದಾಚೆಗೆ ಅನುಭವದಿಂದಾಚೆಗೆ, ಘಟನಾವಳಿಯಿಂದಾಚೆಗು ನೋಡುತ್ತದೆ. ಆ ಕಾದಂಬರಿಯ ಎಲ್ಲ ಘಟನೆಗಳು ಒಂದೇ ಕುಟುಂಬದಲ್ಲಿ ಒಂದೇ ಊರಿನಲ್ಲಿ ನಡೆದಿರುವುದು ಖಂಡಿತ ಸಾಧ್ಯವಿಲ್ಲ. ಆದರೆ ಒಂದು ಕಾಲದ ಒಬ್ಬ ಮನುಷ್ಯನ, ಒಂದು ಕುಟುಂಬದ ಕತೆ ಹೇಳಬೇಕಾದರೆ, ಹೇಳುವುದೆಂದರೆ, ಆ ಕಾಲದ ಎಲ್ಲ ಮನುಷ್ಯರ ಎಲ್ಲ ಕುಟುಂಬಗಳ ಕತೆಯನ್ನು ಹೇಳಿದಂತೆ/ ಒಳಗೊಂಡಂತೆ. ಈ ಕಾರಣಕ್ಕಾಗಿ ಅದು ಹಲವು ಕುಟಂಬಗಳ, ಹಲವು ಸ್ವಭಾವದ ಮನುಷ್ಯರ, ಅನೇಕ ಸ್ಥಳ, ಸಂದರ್ಭಗಳನ್ನು ತನ್ನ ಸೃಜನಶೀಲ ತೆಕ್ಕೆಯೊಳಗೆ ಬಂಧಿಸುತ್ತದೆ. ಹೀಗೆ ಬಂಧಿಸುತ್ತಾ ತನ್ನ ಕಾಲದ ಎಲ್ಲ ಅನುಭವಗಳನ್ನು ಒಳಗೊಳ್ಳುತ್ತಾ ತಾನೇ ಒಂದು ಹೊಸ ವಾಸ್ತವವಾಗುತ್ತದೆ. ಮುಂದಿನ ತಲೆಮಾರಿನ ಓದುಗರಾದ ನಮಗೆ ಇಂತಹ ಕಾದಂಬರಿ ನೀಡುವ ವಾಸ್ತವವೇ ಆ ಕಾಲದ ನಿಜವಾದ ವಾಸ್ತವವು ಆಗಿಬಿಡುತ್ತದೆ. ಗೃಹಭಂಗ ವರ್ಣಿಸುವ ವಾಸ್ತವ ಪ್ರಾಮಾಣಿಕವಾದ್ದರಾದರೂ ಅದು ಸೃಷ್ಟಿಸುವ ವಾಸ್ತವ ಈ ಸ್ವರೂಪದ್ದಲ್ಲ. ❑

# ಸಾವಿನ ಭೀತಿಯಲ್ಲಿರುವ ರೂಪಕಗಳು: ಹೆಚ್.ಎಸ್. ಶಿವಪ್ರಕಾಶ



ಡಿ.ವಿ. ಪ್ರಹ್ಲಾದ್

ಕನ್ನಡದ ಬಹುಮುಖ್ಯ ಕವಿ, ನಾಟಕಕಾರರು-ಹೆಚ್.ಎಸ್. ಶಿವಪ್ರಕಾಶ. ಈಗ ದೆಹಲಿಯ ಜವಾಹರ್ ವಿಶ್ವವಿದ್ಯಾಲಯದಲ್ಲಿ ಸಹಪ್ರಾಧ್ಯಾಪಕರಾಗಿದ್ದಾರೆ. ಈಚೆಗೆ ಅವರು ಬೆಂಗಳೂರಿಗೆ ಬಂದಿದ್ದಾಗ ಅವರೊಂದಿಗೆ ನಡೆಸಿದ ಅವಸರದ ಮಾತುಕತೆ ಇದು. ಆ ಸಂಜೆ ನಮ್ಮ ಜೊತೆಗೆ ಖ್ಯಾತ ರಂಗ ನಿರ್ದೇಶಕರಾದ ಸಿ. ಬಸವಲಿಂಗಯ್ಯ ಮತ್ತು ಇಕ್ಬಾಲ್ ಅಹಮದ್ ಅವರು ಈ ಮಾತುಕತೆಯ ಭಾಗವಾಗಿದ್ದರು. ರಂಗಭೂಮಿ ಕಾವ್ಯ ಜಾಗತೀಕರಣದ ಪ್ರಭಾವಗಳನ್ನು ಕುರಿತ ಈ ಹರಟೆಯ ವಿವರ ಇಲ್ಲಿದೆ.

ಪ್ರಹ್ಲಾದ್: ಶಿವಪ್ರಕಾಶ್, ನಿಮ್ಮ ಆಧ್ಯಾತ್ಮಿಕ ಆತ್ಮಕತೆ 'ಬತ್ತೀಸ ರಾಗ' ಈಗಿನ ಹತ್ತು ವರ್ಷಗಳ ಕೆಳಗೆ ಬರೆಯಲು ಸಾಧ್ಯವಾಗುತ್ತಿತ್ತೇ? ಅಥವಾ ಅಂಥಾ ಸಾಹಿತ್ಯ ಸಂದರ್ಭ ನಮ್ಮಲ್ಲಿತ್ತೆ?

ಶಿವಪ್ರಕಾಶ: ಇಲ್ಲ ಬರಲಿಕ್ಕೆ ಸಾಧ್ಯವಿರಲಿಲ್ಲ. ಅಲ್ಲಮನ ಮಾತಿನ ಹಾಗೆ 'ಮರದೊಳಗಿನ ಪ್ರಕೃತಿ ಸ್ವಭಾವಂಗಳು ಮರ ಕಾಲವಂಶದೊಳಗೆ ತರುವವೋ' ಎಂಬ ಮಾತಿನಂತೆ ಹತ್ತು ವರ್ಷಗಳ ಕೆಳಗೆ ನನ್ನ ಕೃತಿಗಳಲ್ಲಿ ಇಂಥಾದ್ದೊಂದು ತಯಾರಿ ನಡೆಯುತ್ತಿತ್ತು. ಮಹಾಚೈತ್ರದ ಅವಧೂತ, ಟಿಪ್ಪೂಸುಲ್ತಾನದ ಟಿಪ್ಪುವೇ ಒಬ್ಬ ಸಂತನ ಹಾಗೆ ಇರುತ್ತಾನೆ, ಮಂಟೆಸ್ವಾಮಿ, ಮಾದಾರಿಮಾದಯ್ಯ, ಅಥವಾ ನನ್ನ ಕಾವ್ಯದಲ್ಲಿ ಬಂದಿರುವ ನಾಗಲಿಂಗ ಯೋಗಿಗಳು ಈ ಪಾತ್ರಗಳ ಮೂಲಕ ಹೊರಬರುತ್ತಿದ್ದವು. ಇವನು ನಿರ್ಲಕ್ಷಿತ ಸಂಸ್ಕೃತಿಗಳ ಬಗ್ಗೆ ಬರೆಯುತ್ತಿದ್ದಾನೆ ಅಂತ ವಿಮರ್ಶಕರು ಹೇಳಿದರು. ಒಂದು ಸಿದ್ಧಾಂತವನ್ನು ಇಟ್ಟುಕೊಂಡು ಬರೆಯಲಿಲ್ಲ ಆಯಾಕಾಲದ ಜರೂರತ್ತಿಗೆ ತಕ್ಕ ಹಾಗೆ ಸೃಜನಶೀಲತೆ ಪ್ರತಿಕ್ರಿಯಿಸುತ್ತಿರುತ್ತೆ.

ಜಡಗೊಂಡ ಮಾರ್ಕ್ಸ್‌ವಾದ ಸರಳೀಕೃತ ಭೌತಿಕವಾದಿ ನೆಲೆಯನ್ನ ಬಿಟ್ಟು ಹಿಂದುತ್ವದ ವಾದದ ಜರೂರಿಗಳಿಗೂ ಬಲಿಯಾಗದೆ ಜನರ ಸಂಸ್ಕೃತಿಯ ಬೇರೆ ಬೇರೆ ನೆಲೆಗಳನ್ನ ಹುಡುಕಿಕೊಳ್ಳೋದು ಅದರ ತಾತ್ವಿಕ ಮತ್ತು ಕಲಾತ್ಮಕ ಸ್ವರೂಪ. ಇವು ನನ್ನ ಹಿಂದಿನ ಕೃತಿಗಳಲ್ಲಿ ಬಂದಂಥವು. ಈಗಿನ ನನ್ನ ನಿಜಜೀವನದ ಅನುಭವ ಇದರಲ್ಲಿದೆ. ಹತ್ತು ವರ್ಷಗಳ ಮೊದಲಿಗೆ ಇಂಥಾದ್ದೊಂದು ಬರೆದಿದ್ದರೆ ತಮಾಷೆ ಮಾಡುತ್ತಿದ್ದರು. ಈಗ ಅದಕ್ಕೆ ಒಂದು ಭಿತ್ತಿ ತಯಾರಾಗಿದೆ. ಕನ್ನಡದಲ್ಲಿ ಬೆಳಗೆರೆ ಕೃಷ್ಣ ಶಾಸ್ತ್ರಿಗಳು ಬರೆದದ್ದು,

ಚಳ್ಳಕೆರೆಯ ಮಲ್ಲಣ್ಣನವರದ್ದು ಈ ರೀತಿಯ ಕೃತಿಗಳಿವೆ. ಆದರೆ ನಾನು ಚಿತ್ರಿಸಿರುವುದು ಇವೆರಡಕ್ಕಿಂತಲೂ ಭಿನ್ನ ಒಬ್ಬರ ಜೀವನ ಚರಿತ್ರೆಯಾಗಿರದೆ ಇಬ್ಬರು ಮೂವರ ಬಗ್ಗೆ ಬರೆದಿದ್ದೇನೆ. ಹಿಂದೆ ನನಗೇ ನಾನು ಇದನ್ನ ಎಷ್ಟು ನಂಬಬೇಕೋ ಬಿಡಬೇಕೋ ನನಗೇ ಸ್ಪಷ್ಟವಾಗಿರಲಿಲ್ಲ ಈಗ ಅಂಥದ್ದಕ್ಕೆ ಕಾಲ ಪಕ್ವವಾಗಿದೆ. ನಾಟಕ ಕಾವ್ಯಗಳಲ್ಲಿ ಒಂದು ರೂಪ ಪಡೆದಿದ್ದ ಈ ಅನುಭವ ಹೀಗೆ ಬರೆಯಬೇಕನ್ನಿಸಿ ಬರೆದಿರುವೆ. ಬರೆಯುವಾಗ ಈಗಲೂ ನನಗೆ ಮುಜುಗರ ಇದೆ. ಬಹಳ ಜನಕ್ಕೆ ಈ ರೀತಿ ಬರೆಯುವ ಕ್ರಮಕ್ಕೆ ವಿರೋಧವಿದೆ. ಆಧ್ಯಾತ್ಮಿಕ ಅನುಭವ ವೈಯಕ್ತಿಕವಾದದ್ದು ಸಾಮೂಹಿಕವಾದದ್ದಲ್ಲ ಅಂತ. ಶಿಶುನಾಳ ಷರೀಫರನ್ನ ಬಸವಣ್ಣನವರನ್ನ ಹೆಳವನಕಟ್ಟೆ ಗಿರಿಯಮ್ಮನವರ ಬರಹಗಳನ್ನ ವೈಯಕ್ತಿಕ ಅಂತ ಕರೆಯಲಾಗುವುದಿಲ್ಲ. ಇದೊಂದು ಸಾಮೂಹಿಕವಾದ ಪ್ರಕ್ರಿಯೆ. ಜೀವಂತವಿಲ್ಲದವರುಗಳ ಬಗ್ಗೆ ಹಾಗೆ ಬರೆದಾಗ ಒಪ್ಪಬಲ್ಲರು. ಆದರೆ ಈಗಲೂ ಆ ಪರಂಪರೆ ಜೀವಂತವಿದೆ. ಹಾಗೆ ನಾನು ಕಂಡ ಕೆಲವು ವ್ಯಕ್ತಿಗಳನ್ನ ನಿರೂಪಿಸಿದ್ದೇನೆ.

ಅಶದುಲ್ಲಾ ಖಾದ್ರಿ ವಲಿಯವರನ್ನ ಕಾಣದೆ ಹೋಗಿದ್ದಿದ್ದರೆ, ಮಂಟೆಸ್ವಾಮಿಯಂಥಾ ಪಾತ್ರವನ್ನ ಕಲ್ಪಿಸಿಕೊಳ್ಳಲು ಆಗುತ್ತಲೇ ಇರಲಿಲ್ಲ.

ನಾನು ಚಿತ್ರಿಸಿರುವ ಸಂತರು ನಮ್ಮ ಸಿದ್ಧ ಪ್ರಸಿದ್ಧ ಸಂತರುಗಳಿಗಿಂತಾ ತುಂಬಾ ಭಿನ್ನ. ಮಸೀದಿಗೆ ಹೋಗದ ಮುಸ್ಲಿಂ ಸಂತ, ಚರ್ಚಿಗೇ ಹೋಗದ ಕ್ರಿಶ್ಚಿಯನ್ ಸಂತ, ದೇವಸ್ಥಾನ ಮಠಗಳ ಹತ್ತಿರ ಸುಳಿಯದ ಅವಧೂತ ಪರಂಪರೆಯ ಸಂತ ಇವರೆಲ್ಲಾ ಮುಖ್ಯ ಪ್ರವಾಹದ ಆಚೆಗೆ ಇರುವವರು.

ಸೃಜನಶೀಲತೆ ಮುಖ್ಯ ಪ್ರವಾಹದಿಂದ ಹೊರಗಿನಿಂದ ಬರುವಂಥದ್ದು ಎನ್ನುವುದು ನನ್ನ ಮೊದಲ ನಂಬಿಕೆ.

ಪ್ರಹ್ಲಾದ್: ನಿಮ್ಮ ಕಾವ್ಯ ಶಕ್ತಿ ಈ ಪ್ರಯೋಗಶೀಲತೆಯಲ್ಲಿ ಕಡಿಮೆಯಾಗಿದೆ ಅನ್ನೋ ಅನುಮಾನ ಕೆಲವರಲ್ಲಿದೆ.

ಶಿವಪ್ರಕಾಶ: ಗೊತ್ತಿಲ್ಲ, ಹಿಂದಿನ ಥರದ ಕಾವ್ಯ ನನಗೆ ಬರೆಯಲಿಕ್ಕೆ ಆಗುವುದಿಲ್ಲ. ಆದರೆ ಈಚೆಗೆ ಬಹಳ ಜನ ವಿಮರ್ಶಕರು ನನ್ನ ವಚನಗಳನ್ನು ತತ್ವಪದಗಳನ್ನ ಬೇರೆಯದೇ ರೀತಿಯ ಪ್ರಯೋಗವನ್ನಾಗಿ ಗುರುತಿಸುತ್ತಾರೆ. 'ಅಣುಕ್ಷಣಚರಿತೆ' ಬಂದಾಗ ಸರಳವಾಯ್ತು ಅಂದರು ಅದರಲ್ಲೂ ನವ್ಯ ವಿಮರ್ಶಕರು ಮುಂದೆ 'ಸೂರ್ಯಜಲ' ಬಂದಾಗ ಇದು ತುಂಬಾ ಬಿಗಿಯಾಯ್ತು ಅಂದರು. ನನಗೆ ಯಾವುದೇ ಹಂತಕ್ಕೆ ಬದ್ಧನಾಗೋದು ಇಷ್ಟವಿಲ್ಲ. ಆ ಕಾಲದ ಸೂಕ್ಷ್ಮತೆ ಬದಲಾಗುತ್ತಿದ್ದ ಹಾಗೆ ಸಮಾಜದ ಭಾಷೆಯ ಸವಾಲು ಬದಲಾಗುತ್ತಿದ್ದ ಹಾಗೆ ನಾನು ಬದಲಾವಣೆ ಮಾಡಿಕೊಳ್ಳುತ್ತೇನೆ. ಹಿಂದೆ ಯಾವುದು ಗಟ್ಟಿಯಾಗಿ ಕಾಣುತ್ತಿತ್ತೋ ನಂಗೆ ಇವತ್ತು ಅದು ಗಟ್ಟಿಯಾಗಿ ಕಾಣುತ್ತಿಲ್ಲ.

ಪ್ರಹ್ಲಾದ್: ನಿಮ್ಮ ಕಾವ್ಯದ ಡೆನ್ಸಿಟಿಯನ್ನು ಕುರಿತು ಈ ಮಾತುಗಳು...

ಶಿವಪ್ರಕಾಶ: Concentrated ಆದದ್ದೇ ಶ್ರೇಷ್ಠ ಕಾವ್ಯ ಅಂತ ನನಗೆ ಅನ್ನಿಸೋದಿಲ್ಲ. ಇದು ತುಂಬಾ ಸೀಮಿತವಾದ ವ್ಯಾಖ್ಯೆ. ಪದ್ಯ ಉಸಿರಾಡದಷ್ಟು ಟೈಟಾಗಿಬಿಟ್ಟರೆ ಹ್ಯಾಗೆ. ನವ್ಯ ಕಾವ್ಯದ ಪರಂಪರೆಯಲ್ಲಿ ಯಾರ್‍ಯಾರು ಬರೀತಾ ಇದ್ದಾರೆ. ಐದು ಮಾತ್ರೆಗಳ ಆ ಬಿಗಿಯನ್ನ ಬಿಟ್ಟು ಆಚೀಚೆಗೆ ಹೋಗಲಿಕ್ಕೆ ಸಾಧ್ಯವಾಗಿಲ್ಲ. ಆ ಭಾಷೆ ನನಗೆ ಅಸಹ್ಯವಾಗತ್ತೆ. ಕನ್ನಡದ ಜೀವಾಳ ಇರೋದು ಅಂಶಿ ಛಂದಸ್ಸಿನಲ್ಲಿ. ಆದರೆ ನಮ್ಮ ನವ್ಯ ಕವಿಗಳು ಕಂಬಾರರನ್ನ ಬಿಟ್ಟರೆ ಅಂಶಿ ಛಂದಸ್ಸಿಗೆ ಹೋಗಲೇ ಇಲ್ಲ. ಜನಪದ ಕಾವ್ಯ ದಾಸರಪದ, ವಚನ ತತ್ವಪದಗಳ ಶಕ್ತಿ ಇರೋದು ಅಂಶಿಛಂದಸ್ಸಿನಲ್ಲಿ ಈ ಜನ ವಿಮುಖವಾದ ನವ್ಯ ಸಾಹಿತ್ಯವಾಗಲೀ ಬಂಡಾಯ ಸಾಹಿತ್ಯವಾಗಲೀ ಮೊದಲನೆಯದಾಗಿ ಜನಪದ ಸಾಹಿತ್ಯವೇ ಅಲ್ಲ ಅವು. ಶಿಷ್ಯ ಸಾಹಿತ್ಯ ನಾವು ಭ್ರಷ್ಟ ಸಾಹಿತ್ಯ ಬರೆಯುವವರು ಶಿಷ್ಟ ಸಾಹಿತ್ಯ ಅಲ್ಲ. ಅಲ್ಲಮ ಹೇಳುತ್ತಾನೆ ''ನಡೆದರೆ ನಡೆಗೆಟ್ಟು ನಡೆಯಬೇಕು, ನುಡಿದರೆ ನುಡಿಗೆಟ್ಟು ನುಡಿಯಬೇಕು''.

ನಮ್ಮ ವಿಮರ್ಶೆ ಬದಲಾಗುತ್ತಿರುವ ಸೆನ್ಸಿಬಲಿಟಿಯನ್ನ ಗ್ರಹಿಸುವಷ್ಟು ಸೂಕ್ಷ್ಮ ಸಶಕ್ತವಾಗಿಲ್ಲ. ವಿಮರ್ಶೆ ಗುರುತಿಸುವುದಕ್ಕೆ ಸೃಜನಶೀಲ ಲೇಖಕ ಕಾಯಲಿಕ್ಕಾಗುವುದಿಲ್ಲ ಪ್ರಯೋಗದಲ್ಲಿ ಮುಂದೆ ಮುಂದೆ ಹೋಗಬೇಕು.

ಪ್ರಹ್ಲಾದ್: ನಿಮ್ಮ ಹೊಸ ನಾಟಕ 'ಮದುವೆಯ ಹೆಣ್ಣು' ಕುರಿತು ಒಂದಷ್ಟು ಹೇಳಿ...

ಶಿವಪ್ರಕಾಶ: ನನಗಿಂತ ಈಗ ಅದನ್ನ ಕೇಳಿರುವ ಗೆಳೆಯರು ಹೇಳುತ್ತಾರೆ. ಬಸವಲಿಂಗಯ್ಯ ನೀವೇ ಹೇಳಿ...

ಬಸವಲಿಂಗಯ್ಯ: ಕನ್ನಡದ ಮಟ್ಟಿಗೆ ನಾಟಕ ಅಂದರೆ ಕೈಲಾಗುಗಳನ್ನ ಬರೆಯೋದು ಅಂತಾಗಿದೆ. ಆದರೆ ನಿಜವಾದ ನಾಟಕ ಕಾವ್ಯವಾಗಿರಬೇಕು. ರಾಮಾಯಣ, ಮಹಾಭಾರತ, ಮಂಟೆಸ್ವಾಮಿ ಮುಂತಾದವು ಜನರ ಮಧ್ಯೆ ಇದ್ದು ಪುನಃ ಪುನಃ ಸೃಷ್ಟಿಗೊಂಡು ಬೆಳೆಯುತ್ತಿವೆ. ಎಪ್ಪತ್ತರ ದಶಕದ ನಂತರದ ಕನ್ನಡದ ನಾಟಕಗಳಲ್ಲಿ ಕಾವ್ಯ ನಾಪತ್ತೆಯಾಗಿದೆ ಅಂತ ಅನ್ನಿಸುತ್ತಿತ್ತು. ಶಿವಪ್ರಕಾಶರ ನಾಟಕಗಳಲ್ಲಿ ಇಂಥಾ ಕಾವ್ಯ ಇದೆ, ನಾಟಕದ ನಡಿಗೆಯಲ್ಲಿ ಇದೊಂದು ಹೊಸಾ ಆಲೋಚನೆ ಅಂತ ನನಗೆ ಅನ್ನಿಸಿತು.

ಒಬ್ಬ ನಿರ್ದೇಶಕನಾಗಿಯೂ ನನ್ನ ಈ ನಾಟಕ ಛಾಲೆಂಜ್ ಮಾಡತ್ತೆ. 'ಮದುವೆ' ಎನ್ನುವ ಒಂದು ಸಂಸ್ಥೆಯ ವಿಷಮ ಸ್ಥಿತಿಯನ್ನು ಇದು ನಿರೂಪಿಸುತ್ತದೆ.

ನೀಲಗಿರಿಯ ಬುಡಕಟ್ಟು ಜನಾಂಗದ ಕಥೆಯೊಂದನ್ನ ಪ್ರೇರಣೆಯಾಗಿಕೊಂಡು 'ನೋ' ನಾಟಕ ಪ್ರಕಾರದ ಹಲವು ಅಂಶಗಳನ್ನ ಬಳಸಿಕೊಂಡಿದ್ದಾರೆ. ಒಂದು Ritualistic Play ಆಗಿದೆ. ಬರೇ ಮೂರು ನಾಲ್ಕು ಪಾತ್ರಗಳನ್ನ ಇಟ್ಟುಕೊಂಡು ಒಂದು ದರ್ಶನವನ್ನ ಕೊಡುತ್ತ 'ಮದುವೆ'ಯ ಬಗ್ಗೆ ಒಂದು ಹೊಸಾ ಆಖ್ಯಾನ ಈ ನಾಟಕದಲ್ಲಿದೆ, ಜೊತೆಗೆ ಇದೊಂದು ಟ್ರ್ಯಾಜಡಿ. ಟ್ರ್ಯಾಜಡಿಯೂ ಕನ್ನಡದಲ್ಲಿ ಅಪರೂಪ.

ಇಕ್ಬಾಲ್: ಹೌದು, ನಮ್ಮಲ್ಲಿ ಟ್ರ್ಯಾಜಿಡಿ ನಾಟಕಗಳು ಕಮ್ಮಿ. ಅಶ್ವತ್ಥಾಮ ದುರ್ಯೋಧನರನ್ನ ಇಟ್ಟುಕೊಂಡು ಟ್ರ್ಯಾಜಿಡಿಯನ್ನ ನಿರೂಪಣೆ ಮಾಡ್ತೇವೆ. ಆಧುನಿಕ ಸಂವೇದನೆಯ ದುರಂತ ಈ ನಾಟಕದಲ್ಲಿ ಕಾಣಸಿಗುತ್ತೆ, ಹ್ಯಾಗೆ ಹ್ಯಾಮ್ಲೆಟ್ ನಾಟಕದಲ್ಲಿ ದುರಂತವನ್ನ ಶೇಕ್ಸ್ಪಿಯರ್ ತನ್ನ ಬರವಣಿಗೆಯ ಸಂವಿಧಾನದ ಮುಖಾಂತರ ನಿರೂಪಿಸಿದ ಹಾಗೇ ಅಂಥಾ ದುರಂತದ ನಿರೂಪಣೆ ಮೊದಲ ಸಲ ಇಲ್ಲಿ ಕಾಣಸಿಗುತ್ತೆ.

ಬಸವಲಿಂಗಯ್ಯ: ಮರಾಠಿ ರಂಗಭೂಮಿಯಲ್ಲಿ ಈ ರೀತಿಯ ಸಮಕಾಲೀನ ಸಮಸ್ಯೆಗಳನ್ನ ತಗೋತಾರೆ, ಮದುವೆ, ಸಂಸಾರ, ಗಂಡ ಹೆಂಡತಿ ಮುಂತಾದ ಬಿಕ್ಕಟ್ಟುಗಳನ್ನ ನಿರೂಪಿಸ್ತಾರೆ. ಆದರೆ ನಮ್ಮ ಕನ್ನಡ ರಂಗಭೂಮಿ ಕಾವ್ಯದಲ್ಲಿ ನಿರೂಪಿಸ ಹೊರಟಿದ್ಯಲ್ಲ.

ಪ್ರಹ್ಲಾದ್: ಕನ್ನಡದ ಮಟ್ಟಿಗೆ Realistic Theatre ಬೆಳೆಯಲಿಲ್ಲ ಯಾಕೆ

ಬಸವಲಿಂಗಯ್ಯ: ನಾಟಕ ಅನ್ನೋದೆ Realistic ಅಲ್ಲ ಸಾರ್,

ಶಿವಪ್ರಕಾಶ: ಕನ್ನಡದ Realistic ನಾಟಕಗಳ ಕರ್ತೃಗಳು ಕೆಟ್ಟ ನಾಟಕಕಾರರು. ಇದರಲ್ಲಿ ಶ್ರೀರಂಗರನ್ನೂ ಸೇರಿಸಿಕೊಂಡು ಅವರು ಬಹಳ ದೊಡ್ಡ ಚಿಂತಕರು ಆ ಬಗ್ಗೆ ನನಗೆ ಗೌರವವಿದೆ. ಆದರೆ ಅವರು ತಮ್ಮ ನಾಟಕಗಳಲ್ಲಿ ಒಂದು ಸಿದ್ಧಾಂತವನ್ನ ನಿರೂಪಿಸುತ್ತಾರೆ ಹೊರತು ಒಂದು ಅನುಭವವನ್ನು ಕಟ್ಟಿಕೊಡೋದಿಲ್ಲ. ಕನ್ನಡದಲ್ಲಿ ಒಂದೇ ಒಂದು Realistic ನಾಟಕ ಇಲ್ಲ. ಕಾರ್ನಾಡರ ರಿಯಲಿಸ್ಟಿಕ್ ನಾಟಕ ಅಂಜು ಮಲ್ಲಿಗೆಯೂ ತುಂಬಾ ದುರ್ಬಲವಾದದ್ದು. ಪ್ರಸನ್ನ ಮತ್ತು ದೆಹಲಿಯ ಕೆಲವು ಪ್ರೆಸ್‌ಕ್ಲಬ್ ಬುದ್ಧಿಜೀವಿಗಳು ಅದನ್ನ ಬಹಳ ಗ್ರೇಟ್ ನಾಟಕ ಅಂತ ನಂಬುತ್ತಾರೆ. ಹಿಂದಿಯಲ್ಲಿ ಮೋಹನ ರಾಕೇಶ್‌ರ 'ಆಧೇ ಅಧೂರೆ'ಗಿಂತ, ಆಷಾಢ್ ಕಿ ಏಕ್‌ದಿನ್, ಬಹಳ ಒಳ್ಳೆಯ ನಾಟಕ. ಮರಾಠಿಯಲ್ಲಿ ವಿಜಯ ತೆಂಡೂಲ್ಕರ್, ಮಹೇಶ ದೇಶಪಾಂಡೆ ಮುಂತಾದವರ ನಾಟಕಗಳನ್ನ ನೋಡಿದಾಗಲೂ ಒಟ್ಟಾರೆಯಾಗಿ ಒಳ್ಳೆಯ ರಿಯಲಿಸ್ಟಿಕ್ ನಾಟಕಗಳು, ಇಬ್ಸನ್ ಸ್ಟ್ರಿಂಗ್ ಬರ್ಗ್‌ನಂಥಾ ನಾಟಕಕಾರರನ್ನ ಸರಿಗಟ್ಟುವಂಥಾ ಸಾಮಾಜಿಕ ನಾಟಕಗಳು ಇಲ್ಲ. ಇದಕ್ಕೆ ಕಾರಣಗಳು ನಮಗೆ ಗೊತ್ತಿಲ್ಲ. ಒಂದೊಂದು ಸಂಸ್ಕೃತಿಯೂ ಒಂದೊಂದು ಥರ ಪ್ರತಿಕ್ರಿಯಿಸುತ್ತೆ. ಬಸವಲಿಂಗಯ್ಯ ಹೇಳಿದ ಹಾಗೆ ಮರಾಠಿ ರಂಗಭೂಮಿ ವಿವಾಹದ ದುರಂತವನ್ನ ಗದ್ಯದ ಮೂಲಕ ನಿರೂಪಿಸಿದೆ. ಕನ್ನಡದ್ದು ಇದನ್ನ ಕಾವ್ಯದಲ್ಲಿ ಹೇಳಿದೆ. ಒಂದು ಪ್ರಕಾರವೇ ಶ್ರೇಷ್ಠವಾದದ್ದು ಅಂತ ಯಾಕೆ ನಾವು ಬಗೆಯಬೇಕು?

ಪ್ರಹ್ಲಾದ್: ಪ್ರಯೋಗಶೀಲತೆ ದೃಷ್ಟಿಯಿಂದ...

ಶಿವಪ್ರಕಾಶ್: ಬರೀ ಪ್ರಯೋಗಶೀಲತೆ ದೃಷ್ಟಿಯಿಂದ ರಿಯಲಿಸ್ಟಿಕ್ ನಾಟಕ ಬರೆಯೋನು ಒಬ್ಬ ದ್ರಾಬೆ ಮತ್ತು ಬೋಗಸ್ ನಾಟಕಕಾರ.

ಪ್ರಹ್ಲಾದ್: ನಮ್ಮಲ್ಲಿ ಒಂದು ರಿಯಲಿಸ್ಟಿಕ್ ನಾಟಕಗಳ ಪರಂಪರೆ ಕೂಡ ಬೆಳೆಯಲಿಲ್ಲ.

ಬಸವಲಿಂಗಯ್ಯ: ಬರಲ್ಲ, ನಾವ್ಯಾರೂ ಅದಕ್ಕೆ ಕಾಯ್ತಾ ಇಲ್ಲ ನಾನಂತೂ ಕಾಯ್ತಾ ಇಲ್ಲ. ನಮ್ಮ ಸಿನಿಮಾಗಳೆ ರಿಯಲಿಸ್ಟಿಕ್ ಆಗಲ್ಲ. ಆ ಪ್ರಕಾರದಲ್ಲೇ Stylise ಮಾಡ್ತಾ ಕನಸು ಕಾಣ್ತಾ ಕೂತಿದ್ದಾರೆ.

ಶಿವಪ್ರಕಾಶ್: ರಿಯಲಿಸಂ ಅನ್ನೋದು ಭಾರತದ ಮೇಲು ಜಾತಿಯ ಮಧ್ಯಮವರ್ಗದ ಹುಡುಕಾಟ ನಮ್ಮ ಜಾನಪದ ಕಲೆಗಳು ಜನಪ್ರಿಯ ಕಲೆಗಳೂ ರಿಯಲಿಸ್ಟಿಕ್ ಅಲ್ಲ. ನಾನು ರಿಯಲಿಸ್ಟಿಕ್ ಆಗಿ ಬರೆಯೋಲ್ಲ ಬೇಕಾದವರು ಬರೆದುಕೊಳ್ಳಲಿ. ಮಾರ್ಕ್ಸ್‌ವಾದಿಗಳೂ ರಿಯಲಿಸ್ಟಿಕ್ ಆಗಿ ಬರೆಯಬೇಕು ಅಂತಾರೆ ಅದನ್ನ ನಾವು ರಿಜೆಕ್ಟ್ ಮಾಡ್ತೀವಿ. 12ನೇ ಶತಮಾನದ ವಸ್ತುವನ್ನ ಕುರಿತ ನಾಟಕ ಅಥವಾ ಮಂಟೆಸ್ವಾಮಿ ಕುರಿತ ನಾಟಕ ಜನಗಳ ಮೇಲೆ ಹೆಚ್ಚು ಪ್ರಭಾವ ಬೀರಿ, ಸಮಕಾಲೀನ ವಸ್ತುವನ್ನ ಕುರಿತ ನಾಟಕ ಯಾಕೆ ಪರಿಣಾಮಕಾರಿಯಾಗ್ತಿಲ್ಲ? ಅಂದರೆ ಈ ಥರಹದ ಪೂರ್ವದ ಸಂಕೇತಗಳಿಂದ ವರ್ತಮಾನವನ್ನ ಗ್ರಹಿಸುವ ಅಗತ್ಯ ಜನಕ್ಕಿಲ್ಲ. ಹೆಚ್.ಎಸ್.ಥರದ ಸರಳೀಕೃತ ರಿಯಲಿಸಂಗೆ ನಮ್ಮ ಬುದ್ಧಿಜೀವಿಗಳು ಯಾಕೆ ಗಂಟುಬಿದ್ದಿದ್ದಾರೋ ಗೊತ್ತಿಲ್ಲ.

ಪ್ರಹ್ಲಾದ್: ಕಾವ್ಯ ಇವತ್ತು ಒಂದು ಸಮರ್ಥ ಅಭಿವ್ಯಕ್ತಿ ಮಾಧ್ಯಮವಾಗಿ ತನ್ನ ಶಕ್ತಿಯನ್ನು ಉಳಿಸಿಕೊಂಡಿದೆಯೆ?

ಶಿವಪ್ರಕಾಶ್: ನಮ್ಮ ಸಮಾಜದ ಇಲೆಕ್ಟ್ರಾನೀಕರಣದಿಂದ ರೂಪಕಗಳು ಸಾವಿನ ಭೀತಿಯಲ್ಲಿದೆ. ಧರ್ಮ, ಆಧ್ಯಾತ್ಮ, ಪ್ರೀತಿ ಎಲ್ಲವೂ ರೂಪಕಗಳೇ, ಈ ರೂಪಕಗಳೇ ಇಲ್ಲದ ಒಂದು ಪ್ರಪಂಚವನ್ನ ನಾವು ಪ್ರವೇಶಿಸುತ್ತಿದ್ದೇವೆ. ಸಾಹಿತ್ಯ ಕಾವ್ಯ ಅನ್ನೋದು uteletarian ಆಗುತ್ತಿದೆ. ಒಂದು Consumer Culture ಹಬ್ಬುತ್ತಾ ಇರುವ ಇವತ್ತು ಪ್ರತಿಯೊಂದರ ಬೆಲೆ ಎಷ್ಟು ಎಂದು ತೂಗಲಾಗುತ್ತಿದೆ. ಒಂದು ಪದ್ಯದ ಬೆಲೆ ಎಷ್ಟು ಅದರಿಂದ ದೊರಕಬಹುದಾದ ಅವಾರ್ಡು, ಹಣ, ಅಥವಾ ಪತ್ರಿಕೆಯ ರಿವ್ಯೂ. ಅದೂ ಇಲ್ಲದಿದ್ರೆ ಯಾವುದಾದರೂ ಹುಡುಗಿಯ ಪ್ರೀತಿ. ಇಂಥವು ಮೂಲಭೂತ ನಿರೀಕ್ಷೆಗಳಾಗ ಬಾರದು. ಈ ಗ್ರಾಹಕವಾದದ ಪರಿಣಾಮ ಒಂದು ಸಾಂಸ್ಕೃತಿಕ ಅಪಾಯವಾಗಿ ತೋರುತ್ತಿದೆ. ಪಶ್ಚಿಮ ಯುರೋಪಿನ ಸಮಾಜವಾದದ ಸೋಲು ಇದಕ್ಕೆ ಕಾರಣ. ಅವರು ಅದನ್ನ ಕಾಲಕಾಲಕ್ಕೆ ತಕ್ಕ ಹಾಗೆ ವಿಸ್ತರಿಸಲಿಲ್ಲ. ಜೊತೆಗೆ ಕ್ಯಾಪಿಟಲಿಸ್ಟ್ ಜಗತ್ತಿನ ವಂಚತನವೂ ಕಾರಣ. Consumerism is the enemy and Poetry of life. ಇದರ ಪ್ರಭಾವ ಜಾಸ್ತಿಯಾಗ್ತಾ ಇರುವುದರಿಂದ, ಕವಿಗಳಿಗೆ ಇಚ್ಛಾಶಕ್ತಿಯ ಅಭಾವ ನಮಗೆ ಕಾಣುತ್ತಾ ಇದೆ. ನನಗೂ ಬರೆಯೋಕೆ ಬಹಳ ಕಷ್ಟ ಆಗ್ತಾ ಇದೆ. ನಾನು ಬರೆದರೆ ಹೊಸಥರ ಬರೆಯಬೇಕು. ಹಿಂದಿನದ್ದರ ಪುನರುಕ್ತಿ ಆಗಬಾರದು. ಹಾಗಾಗದಿದ್ದರೆ ಸಾಯೋದು ಮೇಲು. ಬದುಕಿನ ಲಕ್ಷಣ ಅಂದ್ರೆ ಹೊಸ ಆವಿಷ್ಕಾರ ಅಭಿನವ ಗುಪ್ತ ಇದಕ್ಕೆ 'ನವನವೋನ್ಮೇಷಾಲಿನೀ ಪ್ರತಿಭಾ' ಅಂತ ಕರೆದ. ಆದರೆ ಇವತ್ತು ಹೊಸತು ಹುಟ್ಟಲಿಕ್ಕೆ ಗ್ರಾಹಕ ಸಂಸ್ಕೃತಿ ಎಲ್ಲವನ್ನೂ ಅಪವಿತ್ರಗೊಳಿಸಿಬಿಡುತ್ತದೆ. ಈ ಸಂಸ್ಕೃತಿ

ಮನುಷ್ಯನ ಅಂತರಂಗದ ಮೇಲೆ ಸೂಕ್ಷ್ಮವಾದ ಹಲ್ಲೆಯನ್ನು ಮಾಡಿದೆ. ಕನ್ನಡದಲ್ಲೇ ಅಲ್ಲ ಎಲ್ಲಾ ಭಾಷೆಗಳಲ್ಲೂ ಈ ಬರೆಯಲು ಕಷ್ಟವಾಗುತ್ತಿರುವ ಬಿಕ್ಕಟ್ಟು ಇದೆ. ಬಹಳ ಜನ ಉತ್ಸಾಹದಿಂದ ಬರೆವಣಿಗೆ ಆರಂಭಿಸಿದರೂ ಮುಂದುವರೆಸಲಾರದೆ ನಿಲ್ಲಿಸಿಬಿಡ್ತಾರೆ. ಇದು ನಮ್ಮ ಮುಂದಿನ ಜನಾಂಗದ ದುರಂತ. ಆದರೆ ನನಗೆ ಈ ದುರಂತಗಳನ್ನ ದಾಟಿಕೊಳ್ಳೋ ಬೌದ್ಧಿಕ ಆಧ್ಯಾತ್ಮಿಕ ತಯಾರಿಗಳಿತ್ತು ಅದಿಲ್ಲದೇ ಹೋಗಿದ್ದರೆ ಬಹುಶಃ ನಾನೂ ಅದೇ ಥರ ದುರಂತಮಯವಾಗಿ ಆಗುತ್ತಿದ್ದೆ. ಬಹಳ ಕಷ್ಟ ಇದೆ ಇವತ್ತು ಪೊಯೆಟ್ರಿ ಬರೆಯೋದು.

ಪ್ರಹ್ಲಾದ್:ಕನ್ನಡದ ಮಟ್ಟಿಗೆ ನಿಮಗೆ ಕಾಣುವ ಭರವಸೆಯ ಕವಿಗಳು ಯಾರು?

ಶಿವಪ್ರಕಾಶ: ಬಹಳ ಜನಗಳ ಬಗ್ಗೆ ನಾನು ನಿರೀಕ್ಷೆಗಳನ್ನ ಇಟ್ಟುಕೊಂಡಿದ್ದೆ ಆದರೆ ಆ ಭರವಸೆ ಅವರು ಉಳಿಸಿಕೊಳ್ಳಲಿಲ್ಲ. ಲಕ್ಷ್ಮೀಪತಿಯ ಕಾವ್ಯದಲ್ಲಿ ಅವರ ಭಾಷೆ ಕುವೆಂಪು ಅವರಿಂದ ಪ್ರೇರಣೆಗೊಂಡು ಸ್ವಲ್ಪ ಜಡ ಆಗಿದೆ. ಪುಷ್ಪಾರವರಲ್ಲಿ ಅವರ ಕಾವ್ಯ ಸೂಕ್ಷ್ಮತೆಗೆ ತಕ್ಕನಾದ ಬೌದ್ಧಿಕ ಸೂಕ್ಷ್ಮತೆ ಬರಬೇಕಿದೆ. ನಾನು ಗಮನಿಸಿದ ಹಾಗೆ: ಈ ಮಾತನ್ನ ನಾನು ಹೇಳಬಾರದಿತ್ತು ಅನ್ನಿಸಿಯೂ ಹೇಳುತ್ತಿರುವೆ. ಒಂದು ರೂಪಕವನ್ನೂ ಸೃಷ್ಟಿಸಲು ಬಾರದ ಬರಹಗಾರನನ್ನ ಕವಿ ಅಂತ ಹ್ಯಾಗೆ ಕರೆಯೋದು? ಬಂಡಾಯದ ಅನೇಕ ಕವಿಗಳು ಒಂದು ರೂಪಕವನ್ನ ಮಾಡಕ್ಕಾಗಲ್ಲ. ಭಾಷೆಯನ್ನ ರೇಪ್ ಮಾಡ್ತಾರೆ.

ಮಾತು ಒಂದು ದೊಡ್ಡ ಮೆಟಫರ್ ಮಾತನ್ನೇ ಮಲಿನಗೊಳಿಸುವ ಸಂಸ್ಕೃತಿಯ ಬಗ್ಗೆ ನನ್ನ ವಿರೋಧವಿದೆ. ಹಾಗೆಂದ ಮಾತ್ರಕ್ಕೆ ನಾನು ಈ ಕಂಪ್ಯೂಟರ್ ಮತ್ತು ಇಲೆಕ್ಟ್ರಾನಿಕ್ ಸಂಸ್ಕೃತಿಯ ವಿರೋಧಿಯಲ್ಲ ಆದರೆ ಇದನ್ನ ಸಂಘಟಿಸುತ್ತಿರುವ ಒಂದು ಸಾಮಾಜಿಕ, ರಾಜಕೀಯ ಶಕ್ತಿ ಏನಿದೆ ಅದು ಇವುಗಳೆಲ್ಲದರ ದುರುಪಯೋಗ ಮಾಡಿಕೋತಾ ಇದೆ. ಇವತ್ತು ಬಹಳ ಗಟ್ಟಿಯಾದಂಥ ವಾಮಪಂಥದ ಚಳುವಳಿಗಳಿಲ್ಲ. ಅವರೆಲ್ಲಾ ಇನ್ನೂ ರಷ್ಯಾದ ಭ್ರಮೆಗಳಲ್ಲಿದ್ದಾರೆ. ಇಲ್ಲಿ ರೈತರು'ಆತ್ಮಹತ್ಯೆ' ಮಾಡಿಕೊಂಡ ಹಾಗೆ ಅಲ್ಲಿ ಉತ್ತರಾಂಚಲದಲ್ಲಿ ಹೆಣ್ಣುಮಕ್ಕಳು ಸಾಮೂಹಿಕವಾಗಿ ಪತ್ರ ಬರೆದಿಟ್ಟು ನದಿಗೆ ಹಾರಿ ಆತ್ಮಹತ್ಯೆ ಮಾಡಿಕೊಳ್ಳುತ್ತಾ ಇದ್ದಾರೆ. ಯಾಕೆಂದ್ರೆ ಅಲ್ಲಿನ ಕಾಡುಗಳು ಆ ಜನರ ಎಲ್ಲ ಅಗತ್ಯಗಳನ್ನೂ ಪೂರೈಸುತ್ತಿತ್ತು. ಬಯಲು ಸೀಮೆ ಸಂಸ್ಕೃತಿ ಅಲ್ಲಿಗೆ ಹೋಗಿ ಎಲ್ಲ ರೀತಿಯ ಕಳ್ಳತನ, ಸುಳ್ಳತನ ಹಾದರಗಳು ಅಡಿ ಇಟ್ಟವು. ನಮ್ಮ ಪ್ರಗತಿಯ ಮಾದರಿ ಪ್ರಶ್ನಿಸಬೇಕು. ಆದರೆ ಅದನ್ನ ಪ್ರಶ್ನಿಸಬೇಕಾದ್ದು ಮುಂದುವರೆದ ದೇಶಗಳ ದೃಷ್ಟಿಕೋನ ದಿಂದಲ್ಲ. ನಮ್ಮ ಜನಗಳ ಅಗತ್ಯದ ದೃಷ್ಟಿಯಿಂದ, ಈಥರದ ಸಮಸ್ಯೆಗಳೇ ಎಲ್ಲಾ ಕಡೆಯೂ ಇದೆ. ಬೌದ್ಧಿಕ ಆಧ್ಯಾತ್ಮಿಕ ದಿವಾಳಿತನ ಕಾಣಬರುತ್ತಿದೆ.

ಇಹ-ಪರಗಳನ್ನು ಬೇರ್ಪಡಿಸುವ ಯಾವುದೇ ಆಧ್ಯಾತ್ಮಿಕ ಭೌತಿಕ ವಾದದಲ್ಲಿ ನನಗೆ ನಂಬಿಕೆ ಇಲ್ಲ. ನಾನು ಆಗಮಶ್ರೀವಿದ್ಯಾ ಪರಂಪರೆಯವನು. ಕಾಶ್ಮೀರದ ಪ್ರತ್ಯಕ್ಷ ಪರಂಪರೆಯವನು. ನನಗೆ ಇಹ-ಪರ ಎರಡೂ ಒಂದೆ. ❑

# ಒಂದು ನೆನಪು:
# ನಮ್ಮ ಲೇಖಕ ಭಿಷಮ್ ಸಹಾನಿ

ಚಿ. ಶ್ರೀನಿವಾಸರಾಜು



ಕಳೆದ ಶತಮಾನದ ಎಪ್ಪತ್ತರ ದಶದಲ್ಲಿ ಪ್ರಗತಿ ಪಂಥದ ಪ್ರಥಮ ಸಮಾವೇಶ ದಾವಣಗೆರೆಯಲ್ಲಿ ನಡೆಯಿತು. ಅಂದಿನಿಂದಲೂ ಪ್ರೊ॥ ಬಿಷಮ್ ಸಹಾನಿ ನನಗೆ ಪರಿಚಿತರಿದ್ದರು. ಅವರು ತಮ್ಮ ಕೃತಿಗಳ ಮೂಲಕ ಪರಿಚತರಾಗುವ ಮೊದಲು ಒಬ್ಬ ಸುಸಂಸ್ಕೃತ ಮನುಷ್ಯನಾಗಿ ನನ್ನನ್ನು ತಟ್ಟಿದ್ದರು. ಅವರು ಬೆಂಗಳೂರಿಗೆ ಒಮ್ಮೆ ಬಂದಾಗ ನನ್ನ ಹಿರಿಯ ಸ್ನೇಹಿತರಾದ ಪುವ್ಯಾಶ್ರೀಯವರ ತಾಯಿ ಹಾಸಿಗೆ ಹಿಡಿದಿದ್ದರು. ಈ ವಿಷಯ ತಿಳಿದ ಕೂಡಲೇ ಸಹಾನಿಯವರು ಅವರ ಮನೆಗೆ ಧಾವಿಸಿದರು. ಅವರ ಯೋಗಕ್ಷೇಮವನ್ನು ವಿಚಾರಿಸಿಕೊಂಡರು. ದೆಹಲಿಗೆ ಹೋದ ಮೇಲೂ ಅವರ ಆರೋಗ್ಯವನ್ನು ಪತ್ರದ ಮೂಲಕ ವಿಚಾರಿಸಿಕೊಳ್ಳುತ್ತಿದ್ದರು. ಪುವ್ಯಾಶ್ರೀಯವರ ತಾಯಿ ದೊಡ್ಡ ಸಾಹಿತಿಯಲ್ಲ, ಪ್ರಭಾವಶಾಲಿ ವ್ಯಕ್ತಿತ್ವವನ್ನು ಹೊಂದಿರಲಿಲ್ಲ. ಆಕೆ ತನ್ನ ಸ್ನೇಹಿತನ ತಾಯಿ ಎಂಬ ಒಂದೇ ಕಾರಣಕ್ಕೆ ಅವರ ಮನೆಗೆ ಭೇಟಿ ನೀಡಿದ್ದರು. ಹತ್ತು ವರ್ಷಗಳ ಹಿಂದೆ ನಮ್ಮ ಮನೆಗೆ ಸಹಾನಿಯವರನ್ನು ಊಟಕ್ಕೆ ಕರೆದಿದ್ದೆ. ಅಷ್ಟು ದೊಡ್ಡ ಲೇಖಕ ಒಂದೆರಡು ಗಂಟೆಗಳಲ್ಲಿ ಮನೆಯವರಲ್ಲಿ ಒಬ್ಬರಾಗಿ ಬಿಟ್ಟರು. ಯಾವುದೇ ಬಿಂಕ-ಬಿಸುಮಾನಗಳಲ್ಲಿದೆ ಹಿರಿ-ಕಿರಿಯರ ಜೊತೆಗೆ ಒಂದಾಗಿಬಿಟ್ಟರು. ಅವರ ಸರಳತೆ, ಮನುಷ್ಯತ್ವ ಎಲ್ಲರಿಗೂ ಪ್ರಿಯವೆನಿಸಿತು. ಪ್ರೊ॥ ಬಿಷಮ್ ಸಹಾನಿಯವರು ಬೆಂಗಳೂರಿಗೆ ಬಂದಾಗಲೆಲ್ಲಾ ಸಾಮಾನ್ಯವಾಗಿ ಭೇಟಿಯಾಗುತ್ತಿದ್ದರು. ಅವರ ಅಪರೂಪದ ವ್ಯಕ್ತಿತ್ವ ನನ್ನನ್ನೂ ಬೆಳೆಸಿತು.

ಪ್ರೊ॥ ಬಿಷಮ್ ಸಹಾನಿಯವರದು ಕ್ರಿಯಾಶೀಲ ವ್ಯಕ್ತಿತ್ವ. ತಮ್ಮ ಇಳಿವಯಸ್ಸಿನಲ್ಲೂ ಅನೇಕ ಸಂಘ-ಸಂಸ್ಥೆಗಳೊಡನೆ ನಿಕಟ ಸಂಪರ್ಕವನ್ನಿಟ್ಟುಕೊಂಡಿದ್ದರು. ಯುವ ಜನತೆಗೆ ಸ್ಫೂರ್ತಿಯ ಸೆಲೆಯಾಗಿ, ತಮ್ಮ ಸೃಜನಶೀಲತೆಯನ್ನು ಕೊನೆಯವರೆಗೂ ಉಳಿಸಿಕೊಂಡಿದ್ದರು. ಬಹುಕಾಲ ಪ್ರಗತಿಶೀಲ ಲೇಖಕರ ಸಂಘದ ಕ್ರಿಯಾಶೀಲ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸಿದರು. ದಿವಂಗತ ಸಫ್‌ದರ್‌ಹಶ್ಮಿ ಸ್ಮಾರಕ ಸಾಂಸ್ಕೃತಿಕ ಸಂಸ್ಥೆಯಾದ 'ಸಹಮತ'ದ ಸ್ಥಾಪಕ ಅಧ್ಯಕ್ಷರಾಗಿದ್ದರು. ಪ್ರಗತಿಪರ ವಿಚಾರ ಸಂಕಿರಣಗಳಲ್ಲಿ, ರಂಗಭೂಮಿಯಲ್ಲಿ, ಸಿನಿಮಾದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಇತ್ತೀಚಿನ 'ಮಿಸ್ಟರ್ ಆಂಡ್ ಮಿಸೆಸ್ ಅಯ್ಯರ್' ಚಿತ್ರದಲ್ಲಿ ಮುದುಕನ ಪಾತ್ರವನ್ನು ಅತ್ಯಂತ ಪರಿಣಾಮಕಾರಿಯಾಗಿ ಅಭಿನಯಿಸಿದ್ದರು.

ಪ್ರೊ|| ಬಿಷಮ್ ಸಹಾನಿಯವರು ಇಂದಿನ ಪಾಕೀಸ್ಥಾನದಲ್ಲಿರುವ ರಾವಲ್ಪಿಂಡಿಯಲ್ಲಿ 1915ರಲ್ಲಿ ಜನಿಸಿದರು. ಸ್ವಾತಂತ್ರ್ಯ ಆಂದೋಲನದಲ್ಲಿ ಧುಮುಕಿ, 1942ರಲ್ಲಿ ಭಾರತ ಬಿಟ್ಟು ತೊಲಗಿ ಚಳುವಳಿಯಿಂದ ಜೈಲು ಸೇರಿದರು. ಇವರ ಸಹೋದರ ಬಲರಾಜ್ ಸಹಾನಿಯವರೂ ಇವರೊಂದಿಗಿದ್ದರು. ಅನಂತರ ಲಾಹೋರ್‌ನಲ್ಲಿ ಇಂಗ್ಲಿಷ್ ಎಂ.ಎ, ಮುಗಿಸಿ, ಅಲ್ಲೇ ಅಧ್ಯಾಪಕರಾದರು. ದೇಶ ವಿಭಜನೆ ಅವರ ಕುಟುಂಬದ ಗತಿಯನ್ನೇ ಬದಲಾಯಿಸಿತು. ಲಾಹೋರಿನಿಂದ ಭಾರತಕ್ಕೆ ವಲಸೆ ಬಂದರು. ದೇಶ ವಿಭಜನೆಯ ಹಿಂಸೆ, ನೋವು ಅವರ ಮೇಲೆ ಅಚ್ಚಳಿಯದ ಪ್ರಭಾವ ಬೀರಿತು. ಅವರು ರಚಿಸಿದ 'ತಮಸ್' ಮತ್ತು 'ನಾವು ಅಮೃತಸರ ಸೇರಿದೆವು' ಕೃತಿಗಳು ಅವರು ಕಂಡ ಹತ್ಯಾಕಾಂಡಗಳಿಗೆ, ಮಾನವ ನಿರ್ಮಿತ ಗಡಿರೇಖೆಯ ತಲ್ಲಣಗಳಿಗೆ, ಮಾನವೀಯತೆಯನ್ನು ಕಳೆದುಕೊಂಡ ದುರಂತಕ್ಕೆ ಸಾಕ್ಷಿಗಳಾಗಿವೆ. ಇವರ ಕೃತಿಗಳಿಂದ ಆಧುನಿಕ ಹಿಂದಿ ಸಾಹಿತ್ಯಕ್ಕೆ ಹೊಸ ಆಯಾಮ ಬಂದಿದೆ ಎಂದು ಬಲ್ಲವರು ಹೇಳುತ್ತಾರೆ. ಮೃದು ಸ್ವಭಾವದ, ಮೆಲುದನಿಯ ಸಹಾನಿಯವರಿಗೆ ಅನೇಕ ಪ್ರಶಸ್ತಿಗಳು ಹುಡುಕಿಕೊಂಡು ಬಂದುವು. ಅವುಗಳಲ್ಲಿ ಮುಖ್ಯವಾದುವುಗಳೆಂದರೆ ಸೋವಿಯಟ್ ಲ್ಯಾಂಡ್ ಪ್ರಶಸ್ತಿ, ಲೋಟಸ್ ಪ್ರಶಸ್ತಿ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪದ್ಮಶ್ರೀ ಪ್ರಶಸ್ತಿ ಇತ್ಯಾದಿ. ಅವರ 'ತಮಸ್' ಕಾದಂಬರಿ ಗೋವಿಂದ ನಿಹಲಾನಿಯವರ ಕೈಯಲ್ಲಿ, ದೃಶ್ಯ ಮಾಧ್ಯಮದ ಮೂಲಕ ಮರುಹುಟ್ಟು ಪಡೆದಾಗ ಜನಸಾಮಾನ್ಯರಿಗೆ ಪ್ರಿಯವಾಯಿತು. ವಿಭಜನೆಯ ದುರಂತ. ಕೋಮುಸನ್ನಿಯ ಒಳಪದರಗಳು, ಹಿಂಸೆಯ ತಾಂಡವ ನೃತ್ಯ ಪರಿಣಾಮಕಾರಿಯಾಗಿ ಕಲಾತ್ಮಕವಾಗಿ ಅನಾವರಣಗೊಂಡಿತು. ಸಹಾನಿಯವರು ತಮ್ಮ ಕೃತಿಗಳಲ್ಲೆ ಸ್ವತಂತ್ರೋತ್ತರ ಬದುಕನ್ನೂ ಅತ್ಯಂತ ಸಮರ್ಥವಾಗಿ ಸೆರೆಹಿಡಿದಿದ್ದಾರೆ. ಅವರು ಐದು ಕಾದಂಬರಿಗಳನ್ನು ಒಂಭತ್ತು ಕಥಾ ಸಂಕಲನಗಳನ್ನು ಆರು ನಾಟಕಗಳನ್ನು ರಚಿಸಿದ್ದಾರೆ. ಮಕ್ಕಳ ಸಾಹಿತ್ಯವನ್ನಲ್ಲದೆ ರಷ್ಯನ್ ಭಾಷೆಯಿಂದ ಅನೇಕ ಕೃತಿಗಳನ್ನು ಹಿಂದಿಗೆ ತಂದಿದ್ದಾರೆ. ಸಂತ ವ್ಯಕ್ತಿತ್ವದ ಸಹಾನಿಯವರು ಜೀವನಕ್ಕೆ ಬದ್ಧರಾಗಿದ್ದರು. ಅವರ ಆತ್ಮಚರಿತೆ 'ಆಜ್ ಕಿ ಅತೀತ್' ಅವರ ಸಾವಿನ ಕೆಲವು ತಿಂಗಳುಗಳ ಮೊದಲು ಪ್ರಕಟವಾಯಿತು.ಅದು ಆಧುನಿಕ ಭಾರತ ವಿವಿಧ ಮುಖಗಳನ್ನು ಹಿಂದಿ ಸಾಹಿತ್ಯದ ಏರುಪೇರನ್ನು ಸೂಚಿಸುತ್ತದೆ ಎಂದು ಹೇಳುತ್ತಾರೆ. ಸಹಾನಿಯವರು ಬಾಳಿನುದ್ದಕ್ಕೂ ಪ್ರಗತಿಶೀಲ ಮೌಲ್ಯಗಳನ್ನು ಎತ್ತಿಹಿಡಿದು, ಪ್ರೇಮ್‌ಚಂದ್ ಅವರನ್ನು ನೆನೆಪಿಗೆ ತರುವ ಬರಹಗಾರ. ಇವರ ಚೈತನ್ಯಪೂರ್ಣ ವ್ಯಕ್ತಿತ್ವಕ್ಕೆ ಅಂತಿಮ ತೆರೆ ಬಿದ್ದದ್ದು 11 ಜುಲೈ 2003ರಂದು. ಇವರ ಕೆಲವು ಕೃತಿಗಳು ಕನ್ನಡಕ್ಕೂ ಬಂದಿದೆ. ❑

## ಪುಸ್ತಕ ಪರಿಶೀಲನೆ




**ಬತ್ತೀಸರಾಗ (ಆಧ್ಯಾತ್ಮಿಕ ಆತ್ಮಕಥೆ)**
ಲೇ: ಹೆಚ್.ಎಸ್. ಶಿವಪ್ರಕಾಶ
ಪ್ರ: ಅನಿಮಿಷಾ ಪ್ರಕಾಶನ, ಹೊನ್ನಾಳಿ
ಬೆಲೆ: ರೂ60/- ಪ್ರಥಮ ಮುದ್ರಣ: 2003

ನವ್ಯೋತ್ತರ ಬರಹಗಾರರಲ್ಲಿ ಶಿವಪ್ರಕಾಶರದ್ದು ಮುಖ್ಯ ಹೆಸರು. ತಮ್ಮ ಕಾವ್ಯ ನಾಟಕಗಳಲ್ಲಿ ಭಾರತದ ನಿರ್ಲಕ್ಷಿತ ಸಂಸ್ಕೃತಿಯನ್ನ ಕುರಿತು ಸತತ ಶೋಧಕ್ಕೆ ತೊಡಗಿರುವ ಅವರ ಆಧ್ಯಾತ್ಮಿಕ ಆತ್ಮಕತೆ ಬದಲಾಗಿರುವ ನಮ್ಮ ಸಂದರ್ಭದ ಸೂಚಿಯೂ ಆಗಿದೆ. ಇಂಥದ್ದೊಂದು ಆಧ್ಯಾತ್ಮಿಕ ಆತ್ಮಕತೆಯ ಬರವಣಿಗೆ ಆಯ್ಕೆ ವಿಶಿಷ್ಟವಾದದ್ದು ಕೆಲವು ವರ್ಷಗಳ ಕೆಳಗೆ ಲೇಖಕನೊಬ್ಬ ಇಂಥ ಸಾಹಸಕ್ಕೆ ಕೈ ಹಚ್ಚುವ ಎದೆಗಾರಿಕೆ ಮಾಡಲಾಗುತ್ತಿರಲಿಲ್ಲ ಸಾಹಿತ್ಯ ವಲಯದಲ್ಲಿ ಅತ ರ‍್ಯಾಷನಲ್ ಮತ್ತು ಪ್ರೋಗ್ರಸೀವ್ ಅಲ್ಲದ ಆರೋಪಕ್ಕೆ ಒಳಗಾಗಬೇಕಿತ್ತು.

ಶಿವಪ್ರಕಾಶರ 'ಬತ್ತೀಸರಾಗ' ಸಾಹಿತ್ಯ ವಲಯದ ಓದುಗರ ಕುತೂಹಲ ಕೆರಳಿಸಿರುವುದು ಅಷ್ಟೇ ಅಲ್ಲದೆ ಆಧ್ಯಾತ್ಮದ ಬಗ್ಗೆ ಓದುವ ಆಸಕ್ತಿಯುಳ್ಳ ಒಂದು ಓದುವರ್ಗವನ್ನೂ ತನ್ನ ತೆಕ್ಕೆಗೆ ಸ್ವೀಕರಿಸುತ್ತದೆ.

ಇನ್ನು ಕನ್ನಡದ ಮಟ್ಟಿಗೆ ಆಧ್ಯಾತ್ಮಿಕ ಸಾಧನೆಯನ್ನು ಕೇಂದ್ರವಾಗಿರಿಸಿಕೊಂಡ ಆತ್ಮಕತೆ ಮಧುರಚೆನ್ನರ 'ಆತ್ಮಶೋಧ' ಒಂದೇ. ಬೆಳಗೆರೆ ಕೃಷ್ಣಶಾಸ್ತ್ರಿಗಳ ''ಯೇಗ್ದಾಗೆಲ್ಲಾ ಐತೆ'' ಮತ್ತು ಚಳ್ಳಕೆರೆ ಮಲ್ಲಣ್ಣನವರ 'ಭಗವದ್ದರ್ಶನಾಮೃತ'ಗಳು ಸಾಧಕರ ಸಾಧನೆಗಳ ಕನ್ನಡ ನಿರೂಪಣೆಗಳಾಗಿವೆ. ಉಳಿದವು ಬಹುಪಾಲು ಅನುವಾದಗಳು ಅದರಲ್ಲೂ ಸ್ವಾಮಿರಾಮ ಅವರ ''ಹಿಮಾಲಯದ ಮಹಾತ್ಮರ ಸನ್ನಿಧಿಯಲ್ಲಿ'' ಕೃತಿ ಗಮನಾರ್ಹ.

ಬತ್ತೀಸರಾಗ ಹಲವು ಭಾಗಗಳಲ್ಲಿ ವಿವಿಧ ಆಧ್ಯಾತ್ಮ ಸಾಧಕರ ಬಿಡಿ ನಿರೂಪಣೆಯ ನುಡಿ ಚಿತ್ರಗಳಾಗಿವೆ. ಹೀಗೆಂದ ಮಾತ್ರಕ್ಕೆ ಬತ್ತೀಸರಾಗ ಸುಸಂಬದ್ಧವಾಗಿ ನಿರೂಪಿತವಾಗಿದೆಯೆಂದು ಹೇಳಲು ಬರುವುದಿಲ್ಲ. ನಮ್ಮ ಲೇಖಕರು ನಿರೂಪಣೆಯ ಕೇಂದ್ರವಾಗಿ ಬಿಡುವ ಸಾಹಿತ್ಯಿಕ ಸಮಸ್ಯೆಯಿಂದ ಇದು ತಪ್ಪಿಸಿಕೊಳ್ಳಲು ಆಗಿಲ್ಲ. ಶಿವಪ್ರಕಾಶರ ಆಧ್ಯಾತ್ಮಿಕ ಸಾಧನೆಯ ವಿಕಾಸ ಗೋಚರಿಸುವ ಬದಲಿಗೆ ಅವರ ವೃತ್ತಿ ಹಾಗೂ ಕೌಟುಂಬಿಕ ಬಿಕ್ಕಟ್ಟುಗಳು ಮತ್ತು ಅದರ ನಿವಾರಣೆಗಾಗಿ ಅವರು ಪಡುವ ಪಡಿಪಾಟಲುಗಳು ಅದರ ದಾರಿ ದಿಕ್ಕುಗಳು ಇಲ್ಲಿ ಪ್ರಧಾನವಾಗಿಬಿಡುತ್ತವೆ. ಬಿಡಿ ಬಿಡಿಯಾಗೇ ನಿಲ್ಲುವ ಇಲ್ಲಿನ ವ್ಯಕ್ತಿ ಚಿತ್ರಗಳ ಮಧ್ಯದಲ್ಲಿ ಶಿವಪ್ರಕಾಶರ ಆಧ್ಯಾತ್ಮಿಕ ಅನುಭವ ನಾಪತ್ತೆಯಾಗಿ ಬಿಡುತ್ತದೆ. ಸಾಧಕರಾಗಿ ಅವರು ಪಡೆಯುವ ಅನುಭವವಾಗಲೀ ವಿನಯವಾಗಲೀ ಕಾಣ ಬರುವುದಿಲ್ಲ.

ಕನಸುಗಳನ್ನು ಬಹುವಾಗಿ ನಂಬುವ ಶಿವಪ್ರಕಾಶರ ವಿಚಾರಗಳ ಜೊತೆಗೆ ಶಿವರಾಮ ಕಾರಂತರ 'ನಮ್ಮ ಅಳತೆಯನ್ನು ಮೀರಲಾಗದ ದೇವರು' ಎಂಬ ಪ್ರಬಂಧದ ಹಿನ್ನೆಲೆಯಲ್ಲಿ

ಓದಿದಾಗ ನಮ್ಮ ದೇವರ ಕಲ್ಪನೆಗಳು ನಮ್ಮ ಕಲ್ಪನೆಯ ಗಡಿಯಾಚೆಗೆ ದಾಟಲಾರದ ಮಿತಿ ಗೋಚರಿಸುತ್ತದೆ.

ಇದರಲ್ಲಿ ಬರುವ ಬಿಡಿ ಬಿಡಿ ಚಿತ್ರಗಳಾಗಿ ಶೇಕ್ ಅಸದುಲ್ಲಖಾದ್ರಿವಲಿ ಅವರ ಬಗೆಗಿನ ನಿರುಪಣೆ ಬಹಳ ಆಪ್ತವಾಗಿ ಮನಸ್ಸಿಗೆ ತಟ್ಟುವ ಹಾಗಿದೆ. ಒಂದು ವಿಭಿನ್ನವಾದ ಅನುಭವವಾಗಿ ನಿರೂಪಿತವಾಗಿದೆ. ಇದರ ಜೊತೆಗೆ ಕ್ರಿಶ್ಚಿಯನ್ ಬ್ರದರ್‌ನ ಹೀಲಿಂಗ್ ಪ್ರಾರ್ಥನೆ ಬೆಂಗಳೂರಿನ ಅನುಭಾವಿ 'ಮಡಕೆ ಸ್ವಾಮಿಗಳ' ಬಗ್ಗೆ . ಸ್ವಾಮಿ ಭಜನಾನಂದರ ಬಗ್ಗೆ ಬರೆದಿರುವ ನುಡಿಚಿತ್ರಗಳು ಸೊಗಸಾಗಿವೆ. ಇದರ ಜೊತೆಗೆ ಆಧ್ಯಾತ್ಮದ ಹೆಸರಿನಲ್ಲಿ ದಿಕ್ಕು ತಪ್ಪಿಸುವ ವಂಚಕ ಅರೆ ಸಾಧಕರ ಬಗ್ಗೆಯೂ ಇಲ್ಲಿ ನಿರೂಪಣೆಗಳಿವೆ.

ಒಟ್ಟಾರೆ ಇಡೀ ಪುಸ್ತಕ ಓದಿದ ನಂತರ ನಿಲ್ಲುವ ಪ್ರಶ್ನೆಗಳು; ಪವಾಡಗಳು ಅತೀಂದ್ರಿಯ ಶಕ್ತಿ ಆಧ್ಯಾತ್ಮವೇ? ಜೊತೆಗೆ ಆಧ್ಯಾತ್ಮಿಕ ಅನುಭೂತಿ ಸಾಧಿಸಿದಾತ ಅದನ್ನ ಹೇಳಬಹುದೇ ಹೊರತು ಉಳಿದವರು ಆ ಬಗ್ಗೆ ಸೆಕೆಂಡ್‌ಹ್ಯಾಂಡ್ ಕೇಳುಗ/ವೀಕ್ಷಕರಷ್ಟೇ ಅದನ್ನ ಗ್ರಹಿಸುವ ಅನುಭವಿಸುವ ಸಾಧ್ಯತೆ ಕಡಿಮೆಯೇ ಇಡೀ ಪುಸ್ತಕ ಅಸ್ತವ್ಯಸ್ತವಾದ ಅರೆಬೆಂದ ರೊಟ್ಟಿ ತಿಂದ ಅನುಭವ ಕೊಡುತ್ತದೆ. 'ಯೇಗ್ದಾಗೆಲ್ಲಾ ಐತೆ' ನಿರೂಪಿಸಿದ ಕೃಷ್ಣಶಾಸ್ತ್ರಿಗಳ ಲವಲವಿಕೆ ಜೀವಂತಿಕೆಗಳು ಮತ್ತು ತಾನು ನಿರೂಪಣೆಯ ಕೇಂದ್ರವಾಗಿರದ ಗುಣಗಳು ಶಿವಪ್ರಕಾಶರ ಈ ರಾಗದಲ್ಲಿ ಕಾಣಬರುವುದಿಲ್ಲ. ❑

ಡಿ.ವಿ. ಪ್ರಹ್ಲಾದ್



**ಬತ್ತಳಿಕೆ (ಜಾವೇದ್ ಅಖ್ತರ್)**
ಅನು: ಹಾ.ಮ. ಕನಕ
ಪ್ರ: ಕರ್ನಾಟಕ ಸಂಘ, ಪುತ್ತೂರು
ಬೆಲೆ: ರೂ. 150/-. 2003

ದೂರದ ಊರಿನಲ್ಲಿ ಇದ್ದು ಕನ್ನಡದ ಕೆಲಸ ಮಾಡುತ್ತಿರುವ ಹಾಲ್ಕೆರೆ ಮ. ಕನಕ ಇತ್ತೀಚೆಗೆ ತುಂಬಾ ಸುದ್ದಿ ಮಾಡಿದ್ದಾರೆ. ಜಾವೇದ್ ಅಖ್ತರ್‌ರ 'ತರ್ಕಶ್' ಕವನ ಸಂಕಲನವನ್ನು ಕನ್ನಡಕ್ಕೆ 'ಬತ್ತಳಿಕೆ'ಯಾಗಿ ಅನುವಾದಿಸಿದ್ದಾರೆ. ಪುಸ್ತಕದ ಬಿಡುಗಡೆ ಸಮಾರಂಭ ಬೆಂಗಳೂರಿನಲ್ಲಿ ಸಡಗರದಿಂದಲೇ ನಡೆಯಿತು. ನಿಜಕ್ಕೂ ಕನಕರಿಗೆ ಕನ್ನಡಿಗರ ವಂದನೆಗಳು. ಜಾವೇದ್ ಸ್ವತಃ ಬಂದು ಕವನಗಳನ್ನು ವಾಚಿಸಿದರು ಎಂದರೆ ಅದು ಕನ್ನಡಿಗರ ಅದೃಷ್ಟವೇ.

ನಾನು 'ಬತ್ತಳಿಕೆ'ಯನ್ನು ಖರೀದಿಸಿ ಓದಿದೆ. ನಾನೇನೂ ಉರ್ದು ತಜ್ಞನಲ್ಲ. ಆದರೆ ಅನುವಾದದ ಪಕ್ಕದಲ್ಲೇ ಮೂಲ ಕೃತಿಯನ್ನೂ ನೀಡಿದ್ದರಿಂದ ಅವುಗಳ ಮೇಲೂ ಕಣ್ಣುಹಾಯಿಸಿದೆ. ಎಲ್ಲ ಓದಿದ ಮೇಲೆ ನನಗೆ ಕನಕ ಯಾಕೆ ಇಷ್ಟು ಅವಸರ ಮಾಡಿದರು ಎಂದು ಅಚ್ಚರಿಯಾಯಿತು. ಯಾಕೆಂದರೆ

1. ಅನೇಕ ಗಜಲ್‌ಗಳು ಜಾವೇದ್ ನೀಡುವ ಲಯ, ಗೇಯತೆಯನ್ನು ನೀಡುವುದೇ ಇಲ್ಲ.
2. ಗಜಲ್‌ಗಳ ಪ್ರಾಸಕ್ಕಾಗಿ ಹೆಣಗುತ್ತ ಅವುಗಳ ಕಾವ್ಯ ಗುಣವನ್ನೇ ಕಳೆದುಹಾಕಿದ್ದಾರೆ.
3. ಹಲವು ಕಡೆಗಳಲ್ಲಿ ಅರ್ಥ ವ್ಯತ್ಯಾಸವಾಗಿದೆ.
4. ಕನ್ನಡ ಪದಗಳ ಬಳಕೆ ಕೆಲವು ಕಡೆ ಶಿಶುಪ್ರಾಸದ ರೂಪದಲ್ಲಿ ಕಾಣಿಸಿಕೊಂಡಿವೆ.

ನಾನೇನೂ ನನ್ನ ವಾದವೇ ಸರಿ ಎಂದು ಹೇಳುವುದಿಲ್ಲ. ಸಹೃದಯ ಓದುಗರು ತಮ್ಮ ತೀರ್ಮಾನವನ್ನು ತಾವೇ ಕೈಗೊಳ್ಳುವುದು ಉಚಿತ. ಈ ಕೆಳಗೆ ಕೆಲವು ಉದಾಹರಣೆಗಳನ್ನು ಕೊಡುತ್ತಿದ್ದೇನೆ. ದಪ್ಪ ಅಕ್ಷರಗಳನ್ನು ಗಮನಿಸಿ. ಅವುಗಳ ಬಳಕೆ ಸರಿಯೇ ಎಂದು ನೀವೇ ನಿರ್ಧರಿಸಿ.

ಜಹನ್ ಕೀ ಶಾಖೋಪರ್ ಅಶ ಆರ್ ಆ ಜಾತೆ ಹೈ
ಜಬ್ ತೇರೀ ಯಾದೋ ಕಾ ಮೌಸಮ್ ಹೋತಾ ಹೈ (115)

**ಮನದ ಕೊಂಬೆಯಲ್ಲಿ ಕವಿತೆಗಳು ಚಿಗುರುತ್ತವೆ**
**ನಿನ್ನ ನೆನಪಾಗಿ ಇರುತ್ತದೆ ಋತುಮಾನಾನೆ**

ಲೋಗೋ ಸೆ ಸುನ್‌ತೇ ಹೈ ಮಹರಮ್ ಹೋತಾಹೈ

**ಮಂದಿ ಹೇಳುವರು ಲೇಪ ಇದೆ ತಾನೆ?**
**ಕೇಳಿ ಜಗತ್ತು ಎಂಥದಿದೆ ನನ್ನನೆ**

ಹಮ್ ತೋ ಬಚ್‌ಪನ್ ಮೇ ಭೀ ಅಕೇಲೇ ಥೆ
ಸಿರ್ಫ್‌ದಿಲ್ ಕೀ ಗಲೀ ಮೇ ಖೆಲೇ ಥೆ (31)

**ನಮ್ಮ ಬಾಲ್ಯದ ದಿನವೂ ಒಂಟಿಯಾಗಿತ್ತು**
**ಆಟ ಬರಿಯ ಮನದ ಬೀದಿಯಲ್ಲಿತ್ತು.**

ಸಬ್‌ಕಾ ಖುಶೀ ಸೇ ಫಾಸ್‌ಲಾಏಕ್ ಕದಮ್ ಹೈ
ಹರ್‌ಘರ್ ಮೇ ಏಕ್ ಹೀ ಕಮರಾ ಕಮ್ ಹೈ (45)

**ಎಲ್ಲರ ಖುಷಿಗೆ ದೂರವಿದೆ ಇನ್ನೊಂದು ಹೆಜ್ಜೆ**
**ಪ್ರತಿ ಮನೆಯಲ್ಲೂ ಕಡಿಮೆಯಿದೆ ಕೋಣೆಯೊಂದು**

(ಇಲ್ಲಿ ನನಗೆ 'ಏಕ್ ಹೀ ಕಮರಾ' ಪದಗುಚ್ಛವನ್ನು ಕನಕ ಗಮನಿಸಿಲ್ಲ ಅನ್ನಿಸುತ್ತದೆ. ಕಡಿಮೆಯಿದೆ ಕೋಣೆಯೊಂದು ಎನ್ನುವುದಕ್ಕೂ, ಒಂದೇ ಕೋಣೆ ಕಡಿಮೆ ಎನ್ನುವುದಕ್ಕೂ ವ್ಯತ್ಯಾಸ ಇಲ್ಲವೆ?)

ಇಸ್ ಶಹರ್ ಮೇ ಜೀನೇ ಕೆ ಅಂದಾಜ್ ನಿರಾಲೇ ಹೈ
ಹೋಟೋ ಪೆ ಲತೀಫೇ ಹೈ ಆವಾಜ್ ಮೆ ಛಾಲೇ ಹೈ (61)

**ಈ ನಗರದಲ್ಲಿ ಬದುಕುವ ಪರಿಯೇ ಬೇರೆ**
**ಮಧುರ ಮಾತಲ್ಲಿ ದನಿಯಾಳ ಮುಳ್ಳು**

(ನನಗೆ ಇಲ್ಲಿ 'ದನಿಯಾಳ ಮುಳ್ಳು' ಪದ ಬಳಕೆಯಲ್ಲಿ ಎಳ್ಳಷ್ಟೂ ಕಾವ್ಯದ ಅಂದ ಇಲ್ಲ ಅನ್ನಿಸಿದೆ.)

'ಮತ್ತೆ ಮತ್ತೆ ತಿದ್ದಿದ್ದೇನೆ. ಇನ್ನೊಮ್ಮೆ ಕೂತರೆ ಬಹುಶಃ ಇನ್ನಷ್ಟು ತಿದ್ದುವೆನೇನೋ' ಎಂದು ಕನಕ ಮೊದಲೇ ಹೇಳಿಬಿಟ್ಟಿದ್ದರಿಂದ ಅವರು ಈ ದೋಷಗಳಿಂದ ಮುಕ್ತರಾಗಲು ಪರವಾನಗಿ ಅಲ್ಲ. ಈ ಸಂಕಲನದ ಪ್ರಕಟಣೆಗೆ ಮುನ್ನ ಕವನಗಳನ್ನು ಓದಿದವರಲ್ಲಿ ಜಯಂತ ಕಾಯ್ಕಿಣಿ, ರಷೀದ್, ಅತುಲ್, ಯು ಆರ್ ಅನಂತಮೂರ್ತಿ ಇದ್ದಾರೆ. ಡಾ|| ಅನಂತಮೂರ್ತಿಯವರಂತೂ ತಾಸುಗಟ್ಟಲೆ ಅನುವಾದಗಳನ್ನು ಕೇಳಿಸಿಕೊಂಡು ಅಲ್ಲಲ್ಲಿ ಸರಿಯಾದ ಪದಗಳನ್ನು ಕೂರಿಸಿ ಗಟ್ಟಿಗೊಳಿಸಿದ್ದಾರಂತೆ!

ಯಶವಂತ ಚಿತ್ತಾಲ, ಕೆ ವಿ ತಿರುಮಲೇಶ್, ತುಳಸಿ, ಮಿತ್ರ, ಪ್ರತಿಭಾ ನಂದಕುಮಾರ್, ವಿವೇಕ, ಮಮತಾ ಸಾಗರ, ಮುಕುಂದ ಜೋಶಿ ಇವರೆಲ್ಲ ಓದಿದ್ದು ದಂಡ ಎಂದು ನಾನು ಹೇಳುತ್ತಿಲ್ಲ.ಆದರೆ ಇಷ್ಟು ತಯಾರಿ, ತಿದ್ದುಪಡಿ, ವಾಚನ, ಶ್ರವಣ ಎಲ್ಲವನ್ನೂ ಇಷ್ಟೆಲ್ಲ ತಪ್ಪುಗಳು ಹೇಗೆ ದಾಟಿ ಸಲೀಸಾಗಿ ಪ್ರಕಟಿತ ಕೃತಿಯಲ್ಲಿ ಬಂದು ಕೂತು ಕಡ್ಲೆಪುರಿ ತಿನ್ನುತ್ತಿವೆ ಎನ್ನುವುದೇ ನನ್ನ ಪ್ರಶ್ನೆ.

ಏನೇ ಹೇಳಿ, 'ಹೊಳೆಬಾಗಿಲು' ಓದಿ ಅದರೊಳಗಣ ಆರ್ದ್ರತೆಯನ್ನು ಆ ಊರು ಕಡೆಯವನಾದ ನಾನು ಆಘ್ರಾಣಿಸಿ ಅದಕ್ಕೆ ಕಾರಣವಾಗಿದ್ದ ಕನಕರನ್ನು ತುಂಬಾ ಮೆಚ್ಚಿದ್ದೆ. ಆದರೆ ಅವರ ಈ ಕೃತಿ ಮಾತ್ರ ನನಗೆ ತುಂಬಾ ಕಸಿವಿಸಿ, ಬೇಸರ ಹುಟ್ಟಿದೆ.

ಇಂಥ ಅನುವಾದವನ್ನು ಪ್ರಕಟಿಸುವಾಗ ನಿಜಕ್ಕೂ ತೋರಬೇಕಾದ ಇತರೆ ಎಲ್ಲ ಎಚ್ಚರಿಕೆಗಳನ್ನೂ ಬೋಳಂತಕೋಡಿಯವರು ತೆಗೆದುಕೊಂಡಿದ್ದಾರೆ. ಒಳ್ಳೆಯ ಕಾಗದ, ಮುದ್ರಣ, ಮುಖಪುಟ, ಮೂಲಕೃತಿಯೂ ಬದಿಯಲ್ಲಿ ಲಭ್ಯ... ಹೀಗೆ ಅವರಿಗೆ ಧನ್ಯವಾದ.

ಬೇಳೂರು ಸುದರ್ಶನ



**ಒಡಲ ನೋವಿನ ಕೊಟ್ಟಿಲ ಹಾಡು**
ಲೇ: ಶಿವಾನಂದ ಕಳವೆ
ಪ್ರ. ಮಿತ್ರ ಮಾಧ್ಯಮ
ಪುಟ: 28 ಬೆಲೆ: ರೂ. 24/-. 2002

ಪತ್ರಕರ್ತ ಶಿವಾನಂದ ಕಳವೆಯರ ಈ ಪುಸ್ತಕ ಫೋರ್ಡ್ ಫೌಂಡೇಶನ್‌ನ ಪ್ಯಾನೋಸ್ ಫೆಲೋಶಿಪ್‌ನ ಅಡಿಯಲ್ಲಿ ಮಾಡಿದ ಅಧ್ಯಯನದ ಫಲವಾಗಿದೆ. ಇಲ್ಲಿನ

ಅಧ್ಯಯನ ಬರಹಗಳು ಒಂದು ದಶಕದ ಕುಣಬಿ, ಮರಾಠಿ, ಗೌಳಿ, ಸಿದ್ದಿ, ಹಾಲಕ್ಕಿ, ಕರೆಒಕ್ಕಲು ಮುಂತಾದ ಕರ್ನಾಟಕದ ಬುಡಕಟ್ಟು ಮಹಿಳೆಯರ ಆರೋಗ್ಯದ ದಾಖಲೆಗಳಾಗಿವೆ ಎಂದು ಲೇಖಕರು ಹೇಳಿದ್ದಾರೆ.

ನಮ್ಮನ್ನು ತಲ್ಲಣಕ್ಕೀಡು ಮಾಡುವ ಇಲ್ಲಿನ ಕೆಲ ಸತ್ಯಗಳು ಫೋರ್ಡ್ ಫೌಂಡೇಶನ್‌ನ ನೆರವಿನಿಂದ ಬೆಳಕಿಗೆ ಬರುವಂತಾದುದು ಬೇಸರದ ಸಂಗತಿಯಾಗಿದೆ. ಇಂಥ ಅಧ್ಯಯನ, ಸಂಶೋಧನೆಗಳು ವಿದೇಶಿ ಸಂಸ್ಥೆಯೊಂದರ ನೆರವಿನಿಂದ ಆಗುತ್ತಿವೆ ಎಂದರೆ ಅದು ನಾಚಿಕೆ ಪಡುವ ಸಂಗತಿಯಲ್ಲದೆ ಮತ್ತೇನಿಲ್ಲ. ಆದರೂ ಈ ಕಿರು ಅಧ್ಯಯನ ಸಕಾಲಿಕವಾಗಿದೆ. ಪ್ರಸ್ತುತವಾಗಿದೆ. ನಮ್ಮ ಅರಿವಿನ ಕಣ್ಣನು ತೆರೆಸುತ್ತದೆ ಎಂಬ ಮತ್ತೊಂದು ಸತ್ಯ ಕಣ್ಣೆದುರಿಗಿದೆ.

ಅತ್ಯಂತ ಚಿಕ್ಕ ವಯಸ್ಸಿನಲ್ಲಿ ಮದುವೆಯಾದ ಗೌಳಿ ಹೆಣ್ಣುಮಕ್ಕಳು 15 ವರ್ಷಗಳಲ್ಲಿ 7 ಮಕ್ಕಳಿಗೆ ಜನ್ಮ ನೀಡುವುದು, ಜನಿಸಿದ ಮಕ್ಕಳು ತಿಂಗಳು, ವರ್ಷದೊಳಗೆ ಸಾಯುವುದು ಹೆರಿಗೆಯಲ್ಲಿ ತಾಯಂದಿರು ಸಾವನ್ನಪ್ಪುವುದು, ಬಾಣಂತಿ ಸನ್ನಿಗೆ ನೇಣು ಚಿಕಿತ್ಸೆ (ಪು 10) ಮಗುವಿನ ನೆತ್ತಿ ಸೀಳುವುದು (ಪು 7) ಮುಂತಾದ ಬೆಚ್ಚಿ ಬೀಳಿಸುವ ಕ್ರೂರ ಸತ್ಯಗಳು ಈ ಪುಸ್ತಕದಲ್ಲಿವೆ.

ವನವಾಸಿ ಗೌಳಿ ಮಹಿಳೆಯರನ್ನು ರಕ್ತಹೀನತೆ ಇದ್ದಾಗಲೂ ಆಪರೇಷನ್ ಮಾಡಿದ ವೈದ್ಯರಿದ್ದಾರೆ. ಇವರು ಎಂಟು ವರ್ಷಗಳಲ್ಲಿ ವಿವಿಧ ಶಿಬಿರಗಳಲ್ಲಿ 16,000 ಸಂತಾನ ಹರಣ ಚಿಕಿತ್ಸೆ ಮಾಡಿದವರು. ಇವರಲ್ಲಿ ಎಷ್ಟು ಮಹಿಳೆಯರಿಗೆ ರಕ್ತಹೀನತೆ ಇದೆಯೆಂದು ಅವರಿಗೆ ಗೊತ್ತಿಲ್ಲ. ರಕ್ತಹೀನತೆ ಇದ್ದವರಿಗೂ ಆಪರೇಷನ್ ಮಾಡಲಾಗಿದೆ. ಒಂದು ಶಿಬಿರದಲ್ಲಿ 60-70 ರವರೆಗೆ ಆಪರೇಷನ್ ಮಾಡುವ ಅವರಿಗೆ ಅದಕ್ಕೆಲ್ಲ ಪುರುಸೊತ್ತಿಲ್ಲ. ಗಮನಿಸಬೇಕಾದ ಮತ್ತೊಂದು ಅಂಶವೆಂದರೆ ಈ ವನವಾಸಿ ಮಹಿಳೆಯರನ್ನು ಚಿಕಿತ್ಸೆಯ ಬಗ್ಗೆ ಯಾವ ತಿಳುವಳಿಕೆ ಮಾಹಿತಿಯನ್ನು ಕೊಡದೆ ಗುರಿ ಸಾಧನೆಗಾಗಿ ಶಿಬಿರಕ್ಕೆ ತರಲಾಗುತ್ತಿದೆ. ಇವು ಸರಕಾರದ ಹಿಂಸೆಯ 'ಯಾತನಾ ಶಿಬಿರ'ಗಳಲ್ಲದೆ ಮತ್ತೇನು? ಶಿವಾನಂದ ಕಳವೆಯರು ಇಲ್ಲಿ ಕೊಡುವ ವಿವರಗಳು ಮಹತ್ವದ್ದಾಗಿವೆ, ನಿಜ. ಇದಕ್ಕಾಗಿ ಅವರನ್ನು ಅಭಿನಂದಿಸೋಣ. ಆದರೆ ಪತ್ರಕರ್ತನಿಗೆ 'ನೈತಿಕ ಎಚ್ಚರ' ಇಲ್ಲದಿದ್ದಾಗ ಇಂಥ ಅಧ್ಯಯನಕ್ಕಾಗಿ ಫೋರ್ಡ್ ಫೌಂಡೇಶನ್ ಕೊಡುವ ನೆರವಿಗಾಗಿ ಕೈ ಚಾಚಬೇಕಾಗುತ್ತದೆ. ಆಮೆರಿಕದ ಫೋರ್ಡ್ ಕಂಪನಿ ಯುದ್ಧದ ಶಸ್ತ್ರಾಸ್ತ್ರಗಳನ್ನು ಮದ್ದು ಗುಂಡುಗಳನ್ನು ತಯಾರಿಸಿ ಮಾರುವ ಕಂಪನಿಯಾಗಿದೆ. ಅದು ಸ್ಥಾಪಿಸಿರುವ ಫೋರ್ಡ್ ಫೌಂಡೇಶನ್ ತಾನು ಅಪೇಕ್ಷಿಸುವ ವಿವರಗಳನ್ನು ತೃತೀಯ ಜಗತ್ತಿನ ರಾಷ್ಟ್ರಗಳ ಸಂಶೋಧರಿಂದ, ಲೇಖಕರಿಂದ, ಪತ್ರಕರ್ತರಿಂದ 'ತರಿಸಿಕೊಳ್ಳುವ' ವರದಿ, ಅಧ್ಯಯನಗಳು ಅನುಮಾನಾಸ್ಪದವಾಗಿದೆ. ಇದಕ್ಕೆ ಕಾರಣವಿದೆ. ಯಾವುದೇ ವಿದೇಶಿ ಸಂಸ್ಥೆಗಳು ತೃತೀಯ ಜಗತ್ತುಗಳಲ್ಲಿ ಮಾಡಿಸುವ ಸಂಶೋಧನೆಗಳು ಅವರ ಚೌಕಟ್ಟಿನೊಳಗೆ, ಅವರ ಆಟದ ನಿಯಮಗಳಿಗೆ, ನಿರ್ದೇಶನಗಳಿಗೆ ಅನುಗುಣವಾಗಿ ನಡೆಯುತ್ತವೆ ಅಲ್ಲಿ ವಸ್ತು ನಿಷ್ಠತೆ, ನಿಖರತೆ ಇವುಗಳಿಗೆಲ್ಲ ಸ್ಥಳವಿಲ್ಲ. ಇದಕ್ಕೆ ನಾಗೇಶ ಹೆಗಡೆ ಅಂಥವರು 'ಸೀಳುನೋಟ ನೀಡುತ್ತಾರೆ' ಬೆಳಕಿಗೆ ಒಡ್ಡುತ್ತಾರೆ ಎಂದು ಮೆಚ್ಚಿ ಬೆನ್ನುಡಿ ಬರೆಯುತ್ತಾರೆ. ನಾಗೇಶ ಹೆಗಡೆ

ಅವರಂಥ ಪತ್ರಕರ್ತರಿಗೂ ಫೋರ್ಡ್ ಫೌಂಡೇಶನ್‌ನ ಕುಖ್ಯಾತಿ ತಿಳಿಯದ ಸಂಗತಿಯೇನಲ್ಲ. ಇವರೆಲ್ಲ ವ್ಯವಸ್ಥಿತವಾಗಿ ನಡೆಸುವ ಇಂಥ ಕೆಲಸಗಳು ಜನರನ್ನು ವಂಚಿಸುವಂಥವುಗಳಾಗಿವೆ. ಈ ಪುಸ್ತಕದ ಸಂದರ್ಭದಲ್ಲಿ ಪುಸ್ತಕ ಹೇಳುವ ಸತ್ಯಗಳಿಗಿಂತ ದೊಡ್ಡ ಸತ್ಯ ಇದಾಗಿದೆ.

ತಮ್ಮದು 10 ವರ್ಷಗಳ ಅಧ್ಯಯನದ ಸಂಗ್ರಹರೂಪ ಎಂದಿರುವ ಲೇಖಕರು ಅದನ್ನು 33 ಪುಟಗಳಲ್ಲಿ ಹೇಳಿದ್ದಾರೆ. 10 ವರ್ಷಗಳಲ್ಲಿ ಬದಲಾದ ವನವಾಸಿ ಮಹಿಳೆಯರ ಸ್ಥಿತಿಗತಿಗಳು, ಈಗ ಅವರ ಆರೋಗ್ಯದ ಸುಧಾರಣೆ ಈ ಯಾವುದರ ಉಲ್ಲೇಖವಾದರೂ ಈ ಪುಸ್ತಕದಲ್ಲಿರಬೇಕಿತ್ತು. '10ವರ್ಷಗಳ ಅಧ್ಯಯನದ ಫಲಶ್ರುತಿ' ಎಂದು ಈ ಪುಸ್ತಕ ನೋಡಿದರೆ ಅನ್ನಿಸುವುದಿಲ್ಲ. ಮತ್ತು ಲೇಖಕರು ಅಧ್ಯಯನ ಮಾಡಿದ್ದೇನೆ ಎಂದಿರುವ ಹಾಲಕ್ಕಿ, ಕರೆ ಒಕ್ಕಲಿಗರು, ಸಿದ್ದಿ ಜನಾಂಗಗಳ ಬಗ್ಗೆ ಪುಸ್ತಕದಲ್ಲಿ ಏನನ್ನೂ ಹೇಳದಿರುವುದು. ಏನು ಹೇಳುತ್ತದೆ?

ಈ ಪುಸ್ತಕದಲ್ಲಿ ಕಳವೆಯವರು ಹೇಳುತ್ತಿರುವ 'ಅಪೇಕ್ಷಿತ ಸತ್ಯ' ಯಾವ ಬಗೆಯದು, ಮತ್ತು ಆ ಸತ್ಯದ ಹಿಂದಿರುವ ನೈತಿಕತೆ ಯಾವ ಸ್ವರೂಪದ್ದು? ಎಂಬುದನ್ನು ನಾವು ಈ ಅಧ್ಯಯನದ ಹಿನ್ನೆಲೆಯಲ್ಲಿ ಕೇಳಿಕೊಳ್ಳಬೇಕಾಗಿದೆ. ಬಹುಶಃ ಈ ಸಂದರ್ಭದಲ್ಲಿ ಕೇಳಿಕೊಳ್ಳಬಹುದಾದ ಪ್ರಶ್ನೆಗಳು ಇವೆರಡೇ ಎಂದು ತೋರುತ್ತದೆ. ❑



**ಮಾತಿನ ಮಂಟಪ**

ಲೇ: ಎಸ್.ಕೆ. ಹರಿಹರೇಶ್ವರ

ಪ್ರಥಮ ಮುದ್ರಣ: 2002

ಬೆಲೆ: ರೂ. 75/-

ಪ್ರ: ಸಪ್ನ ಬುಕ್ ಹೌಸ್, ಬೆಂಗಳೂರು-560 009.

ಅನಿವಾಸಿ ಕನ್ನಡಿಗ ಎಸ್.ಕೆ. ಹರಿಹರೇಶ್ವರರ ಪ್ರಬಂಧಗಳ ಸಂಕಲನ 'ಮಾತಿನ ಮುಂಟಪ' ಅಂತರ್ಜಾಲಕ್ಕಾಗಿ ಬರೆದ ಲೇಖನಗಳ ಸಂಗ್ರಹವಾಗಿದೆ.

ಈ ಪುಸ್ತಕದ ಮೊದಲನೆ ಲೇಖನ ಕಣ್ಣು, ನೋಟ ಮತ್ತು ಕಾಣ್ಕೆಯಲ್ಲಿ ಕಣ್ಣಿಗೆ, ನಮ್ಮ ನೋಟಕ್ಕೆ ಸಂಬಂಧಿಸಿದ ಎಲ್ಲ ವಿವರಗಳು, ಸಂಸ್ಕೃತ ಕಾವ್ಯದ, ಪುರಾಣಗಳ ಕತೆಗಳ ಉಲ್ಲೇಖಗಳು ಈ ಪ್ರಬಂಧದಲ್ಲಿವೆ. ಲಕ್ಷ್ಮಿ ಎಲ್ಲಿದ್ದಾಳು? ಸಮಯ ಪದದ ಬಗ್ಗೆ ಒಂದು ವಿವೇಚನೆ ಮುಂತಾದ ಅನೇಕ ಲೇಖನಗಳಲ್ಲಿ ಅಸಂಖ್ಯಾತ ಮಾಹಿತಿಗಳು, ವಿವರಗಳು ಹಳಗನ್ನಡ, ಸಂಸ್ಕೃತ ಕಾವ್ಯಗಳಿಂದ, ಪುರಾಣದಿಂದ ನಮೂದಾಗಿವೆ. ಆದರೆ ಶ್ರೀಯುತ ಲೇಖಕರು ಇವೆಲ್ಲವನ್ನು ಒಳಗೊಂಡ ಒಳನೋಟವನ್ನು, ತಮ್ಮದೇ ಆದ ನಿಲುವನ್ನು ಇಲ್ಲಿನ ಲೇಖನಗಳಲ್ಲಿ ತೋರುವುದಿಲ್ಲ. ಅವರದೇ ಆದ ದೃಷ್ಟಿಕೋನವೊಂದು ಅವರ ಎಲ್ಲವನ್ನೂ ವಿವರಿಸುವ ಉತ್ಸಾಹದಲ್ಲಿ ಕಳೆದು ಹೋಗಿದೆ. ಹಾಗೆ ನೋಡಿದರೆ ಸ್ವತಃ ಲೇಖಕರೇ ಇಲ್ಲಿನ

ಬಹಳಷ್ಟು ಲೇಖನಗಳಲ್ಲಿ ಇಲ್ಲ. ಅದೇ ಹಳೆ ಮಾಹಿತಿಗಳನ್ನು ಲೇಖಕರು ಓದುಗರಿಗೆ ಕೊಟ್ಟಿದ್ದಾರೆ. ಮತ್ತು ಅಸಂಖ್ಯಾತ ಉದ್ಗಾರ ವಾಚಕ ಚಿನ್ಹೆಗಳು ಅನಗತ್ಯವಾಗಿ ವಾಕ್ಯಗಳ ನಡುವೆ ಬರುತ್ತವೆ. ಲೇಖಕರು ಯಾವುದಕ್ಕೆ ಆಶ್ಚರ್ಯ, ಅಚ್ಚರಿ ಸೂಚಿಸುತ್ತಿದ್ದಾರೆ ಎಂಬುದು ಓದುಗರಿಗೆ ಗೊತ್ತಾಗದಿರುವಂತೆ, ಲೇಖಕರಿಗೂ ಗೊತ್ತಿಲ್ಲದಿರುವ ಸಾಧ್ಯತೆ ಇಲ್ಲಿ ಇದೆ.

ಕುತೂಹಲಕ್ಕೆ ಅವರ ಒಂದು ಲೇಖನವನ್ನು ಗಮನಿಸಿ ''ಕೆಲವು ಕನ್ನಡ ಕವಿಗಳ ದೃಷ್ಟಿಯಲ್ಲಿ ವಸಂತ'' ಈ ಲೇಖನ ಓದುಗರು ಮೊದಲೇ ಊಹಿಸುವಂತೆ ನಮ್ಮ ಕನ್ನಡ ಕವಿಗಳು ಕಂಡ (ಜೊತೆಗೆ ಅಮೆರಿಕದ ಕನ್ನಡ ಕವಿಗಳು ಕಂಡ) ವಸಂತ ಮಾಸದ ವರ್ಣನೆಗಳ ಪಟ್ಟಿಯಾಗಿದೆ. ಹಾಗೆಯೇ ಡಾ. ಜಿ.ಎಸ್. ಶಿವರುದ್ರಪ್ಪನವರ ಕಾವ್ಯದಲ್ಲಿ ವಿಡಂಬನೆಯ ಸೊಗಸು, ಅಡಿಗರ 'ನನ್ನ ಅವತಾರ' ಕವಿತೆಯ ಅಧ್ಯಯನ, ಪು.ತಿ.ನ. ಅವರ ಕಾವ್ಯ ಒಂದು ಸಮೀಕ್ಷೆ, ಶಿವರಾಮ ಕಾರಂತ ಶೀಳ್ಗವನಗಳು, ಕನ್ನಡ ಕಾವ್ಯವ ಕುರಿತಾದ ಈ ಲೇಖನಗಳು ಯಾವ ಸಂವಾದವನ್ನೂ ಸಾಹಿತ್ಯದೊಂದಿಗೆ ನಡೆಸದ ನಿರೀಕ್ಷೆಯಂತೆ ಉಲ್ಲೇಖಗಳೊಂದಿಗೆ ಮುಗಿಯುವ ಲೇಖನಗಳಾಗಿವೆ. ಜೊತೆಗೆ 'ಸಂತರು ಕಂಡ ದೇವರು ಆಚಾರ್ಯ ಶ್ರೀ ರಾಮಾನುಜರು ಕಂಡು ವರ್ಣಿಸುವ ಭಗವಂತನ ದಿವ್ಯ ಮಂಗಳ ಮೂರ್ತಿ ಎಂಬ ದೇವರ ಭಜನೆ ರೂಪದ ಲೇಖನವೂ ಈ ಪುಸ್ತಕದಲ್ಲಿದೆ.

'ನೀರಿನ ಕುರಿತು ವಿಚಾರ ಲಹರಿಗಳು' - ಲೇಖನ 5 ಭಾಗಗಳಲ್ಲಿದೆ. ನೀರಿನ ಬಗ್ಗೆ ಬಹುಶಃ ಎಲ್ಲ ಮಾಹಿತಿಗಳು ಈ ಲೇಖನಗಳಲ್ಲಿವೆ. ಇದು ಮಾಹಿತಿ ಯುಗವಾದ್ದರಿಂದ ಮಾಹಿತಿಯೇ ಸಾಹಿತ್ಯ ಎಂದು ಲೇಖಕರು ತಿಳಿದಂತಿದೆ. ಪಠ್ಯ-ಪುಸ್ತಕದ ಮಾದರಿಯಲ್ಲಿರುವ ಇಲ್ಲಿನ ಲೇಖನಗಳಲ್ಲಿ ಸಂಸ್ಕೃತ ಕಾವ್ಯದ ಉಲ್ಲೇಖ (ಲೇಖಕರ ಅನುವಾದದೊಂದಿಗೆ) ಹೆಚ್ಚಾಗಿರುವುದು ಕುತೂಹಲ ಹುಟ್ಟಿಸುತ್ತದೆ. ಪರಿವಿಡಿ ಇಲ್ಲದಿರುವುದು ಪುಸ್ತಕದ ಒಂದು ಕೊರತೆಯಾಗಿದೆ.

ಪುಸ್ತಕಕ್ಕೆ ಬೆನ್ನುಡಿ ಬರೆದಿರುವ ಲಕ್ಷ್ಮೀನಾರಾಯಣ ಭಟ್ಟರು 'ಸಕ್ಕರೆ ನಿಂಬೆ, ಏಲಕ್ಕಿ, ಕೇಸರಿ - ಹೀಗೆ ಬಗೆ ಬಗೆ ರುಚಿ ಪರಿಮಳಗಳು ಹದವಾಗಿ ಬೆರೆತು ಸಪ್ಪೆ ನೀರು ಸವಿಯಾದ ಪಾನಕವಾಗಿ ನಾಲಿಗೆಯ ಸೌಭಾಗ್ಯವೆನಿಸಿ ಬಿಡುವಂತೆ ಇಲ್ಲಿಯ ಕೆಲವು ಸಾರ್ಥಕ ಪ್ರಬಂಧಗಳ ರೀತಿಯಿದೆ'' ಎಂದಿದ್ದಾರೆ. ಲೇಖಕರ ಮಾತಿಗೆ ನರ್ತಕಿಯ ವಿಲಾಸಪೂರ್ಣ ಚಲನೆ, ಸೂಕ್ಷ್ಮತೆ ಇದೆ ಎಂಬ ಭೀಕರ ಹೊಗಳಿಕೆಯ ಮಾತುಗಳನ್ನು ಪುಸ್ತಕದ ಲೇಖಕರು, ಜೊತೆಗೆ ಓದುಗರು ಮರೆಯುವುದು ಕ್ಷೇಮ.

'ಈ ಪ್ರಬಂಧಗಳು ಉತ್ಕೃಷ್ಟ ರಚನೆಗಳು. ಇವು ಹರಿಹರೇಶ್ವರರಿಗೆ ಶ್ರೇಷ್ಠ ಗದ್ಯ ಶಿಲ್ಪಿ ಎಂಬ ಕೀರ್ತಿ ತಂದ ರಚನೆಗಳು ಎಂದು ಮುನ್ನುಡಿಯಲ್ಲಿ ಸಾ.ಶಿ. ಮರುಳಯ್ಯನವರೂ ಭಟ್ಟರಿಗೆ ತಾವೇನೂ ಕಡಿಮೆ ಇಲ್ಲವೆಂಬಂತೆ ಹೊಗಳಿ ಹಳೆಯ ಯಾವುದೋ ಬಾಕಿಯನ್ನು ತೀರಿಸಲೆಂಬಂತೆ ಪೈಪೋಟಿಯಲ್ಲಿ ಬರೆದಿದ್ದಾರೆ. ಇಂಥವರ ಈ ಬಗೆಯ ಮುನ್ನುಡಿ, ಬೆನ್ನುಡಿಗಳು ಸಾಹಿತ್ಯಕ್ಕೆ, ಲೇಖಕರಿಗೆ ಮತ್ತು ಓದುಗರಿಗೆ ಬಗೆಯುವ ದ್ರೋಹ ಎಂಬುದರಲ್ಲಿ ಯಾವುದೇ ಅನುಮಾನವಿಲ್ಲ.

ಉತ್ಸಾಹಿ ಅಮೆರಿಕ ಕನ್ನಡಿಗ ಹರಿಹರೇಶ್ವರ ಅಂಥವರನ್ನೂ ದಾರಿತಪ್ಪಿಸುವ ನಮ್ಮ ನಿಜ ಕನ್ನಡಿಗರಾದ ಸಾ.ಶಿ. ಮರುಳಯ್ಯ, ಲಕ್ಷ್ಮೀನಾರಾಯಣ ಭಟ್ಟರಿಂದ ಸಾಹಿತ್ಯದ ನಿಷ್ಠುರತೆಯನ್ನು ಎಂದಾದರೂ ನಿರೀಕ್ಷಿಸಲು ಸಾಧ್ಯವೆ?

ಇನ್ನು ಮೇಲೆ ಇಂಥವರ ಮುನ್ನುಡಿ, ಬೆನ್ನುಡಿಗಳ ಗೊಡವೆಗೆ ಓದುಗರು ಹೋಗದೆ, ನೇರವಾಗಿ ಪುಸ್ತಕವನ್ನು ಓದುವುದು ಒಳ್ಳೆಯದು. ನಮ್ಮನ್ನು ರಕ್ಷಿಸಿಕೊಳ್ಳಲು ಇರುವ ಮಾರ್ಗ ಸದ್ಯಕ್ಕೆ ಇದೊಂದೇ. ❑

ಸಂದೀಪ ನಾಯಕ



**ಅರ್ಥಶೋಧ**
ಲೇಖಕ: ಅರವಿಂದ ಚೊಕ್ಕಾಡಿ
ಬೆಲೆ: 55/-
ಪ್ರಕಾಶನ: ಸ್ವಂತಿಕಾ ಸಾಹಿತ್ಯ ಬಳಗ,
ಸುಳ್ಯ (ದ.ಕ.)

ಅರವಿಂದ ಚೊಕ್ಕಾಡಿಯವರ ಹನ್ನೆರಡು ಲೇಖನಗಳ ಸಂಗ್ರಹ 'ಅರ್ಥಶೋಧ' ಅವರ ಮೊದಲ ಪುಸ್ತಕವಾಗಿದೆ.

ರಾಜಕೀಯ, ಪಾರಮಾರ್ಥಿಕತೆ, ಪುರಾಣ, ಸಾಮಾಜಿಕವಾದ ವಿವಿಧ ಸಮಸ್ಯೆಗಳು, ಆರ್ಥಿಕತೆ ಈ ಎಲ್ಲವನ್ನೂ ಒಳಗೊಂಡು ಲೇಖಕರು ಬರೆದಿದ್ದಾರೆ. ಕೆಲ ಸಮಸ್ಯೆಗಳನ್ನು ರಾಜಕೀಯವಾಗಿ, ಆರ್ಥಿಕ ಹಿನ್ನಲೆಯಲ್ಲಿ ಇಲ್ಲಿ ಪರಿಶೀಲಿಸಲಾಗಿದೆ. ಒಂದು ಕಡೆಯಲ್ಲಿ ಅವರದು ನಮ್ಮ ಆರ್ಥಿಕ ನೆಲೆಯ ಶೋಧವಾಗಿದ್ದರೆ, ಇನ್ನೊಂದು ಕಡೆ ಒಂದು ವಸ್ತು ಸಂಗತಿಯ ಅರ್ಥಗಳ ಶೋಧವಾಗಿದೆ. ಆದರೆ ಇವರ ಬರಹದಲ್ಲಿ ಶೋಧನೆಯ ವಿಭಿನ್ನ ನೆಲೆಗಳು ಕಂಡುಬರದು ಎಂಬುದನ್ನು ಇದೇ ಸಮಯದಲ್ಲಿ ನಾವು ಗಮನಿಸಬಹುದಾಗಿದೆ.

ಈ ಪುಸ್ತಕದ ಲೇಖನಗಳಲ್ಲಿ ವಾದಗಳನ್ನು ಮಂಡಿಸುವ ಉತ್ಸಾಹವಿದೆ. ಚರ್ಚೆಯ ಹುಮ್ಮಸ್ಸಿನಲ್ಲಿ ಎಚ್ಚರ ತಪ್ಪುವ, ತನ್ನ ಆಚೆ ಈಚೆನದನ್ನು ಮರೆಯುವ ಸಂಭವ ಇರುವುದನ್ನು ಇಲ್ಲಿನ ಲೇಖನಗಳಲ್ಲಿ ಕಾಣಬಹುದು. ಬದುಕಿದ್ದೇವೆಯೇ ನಾವು? ಎಂಬ ಲೇಖನದಲ್ಲಿ 'ಭಾರತದಲ್ಲಿದ್ದ ವಿಚಾರಶೀಲತೆ ಪಾರಮಾರ್ಥಿಕ ಚಿಂತನೆಯೊಂದಿಗೆ ಬೆಸೆದುಕೊಂಡು ಭೌತವಾದದಿಂದ ಹೊರ ಉಳಿಯಿತೆನ್ನಬಹುದು (ಪುಟ 4) ಎನ್ನುವ ಶ್ರೀಯುತರ ತೀರ್ಮಾನ ಪ್ರಶ್ನಾರ್ಹವಾಗಿದೆ. ಭಾರತೀಯ ಅನೇಕ ವೈಚಾರಿಕ ಧಾರೆಗಳು ಧರ್ಮದ, ಮುಖ್ಯವಾಗಿ ವೈದಿಕತೆಯೊಂದಿಗೆ ಯಾವುದೇ ಸಂಪರ್ಕವಿಲ್ಲದೆ ಇದ್ದವು. ಇಲ್ಲಿ ಭಾರತದ ಪರಮಾರ್ಥ ಚಿಂತನೆಯೆಂದರೆ ವೈದಿಕ ಚಿಂತನೆಯೊಂದೇ ಎಂಬ ಲೇಖಕರ ಸರಳ ಮತ್ತು ಪರಿಮಿತ ಗ್ರಹಿಕೆಯನ್ನು ನಮ್ಮ ಅನೇಕ ಅವೈದಿಕ ಚಿಂತನೆಗಳು ಪ್ರಶ್ನಿಸುವಂತಿವೆ.

ಶ್ರೀಯುತರ ಬರಹಗಳಲ್ಲಿ ಓದಿನಿಂದ ಪಡೆದುಕೊಂಡ ಮಾಹಿತಿಗಳನ್ನು ವಿಶ್ಲೇಷಿಸುವ ಅದನ್ನು ಒಂದು ವಾದವನ್ನಾಗಿ ಪರಿವರ್ತಿಸುವ ಸಾಮರ್ಥ್ಯವಿದೆ. ಆದರೆ ಒಳನೋಟಗಳಿಲ್ಲ. ಉತ್ಸಾಹದಿಂದ ಅನೇಕ ವಿಷಯಗಳನ್ನು ವಿವರಿಸುವ ಲೇಖಕರು ಅದರ ಪುನರಾವರ್ತನೆಯಾಗದಂತೆ ನೋಡಿಕೊಂಡಿದ್ದರೆ ಇಲ್ಲಿನ ಲೇಖನಗಳು ಒಂದು ಮಟ್ಟದಲ್ಲಿ ಇರಬಹುದಾಗಿತ್ತು. 'ಅರ್ಥಶೋಧ' ಎನ್ನುವ ಹೆಸರಿರುವ ಈ ಪುಸ್ತಕದಲ್ಲಿ ಲೇಖಕರು ಏನನ್ನು ಶೋಧಿಸುತ್ತಿದ್ದಾರೆ ಎಂಬುದು ಒಮ್ಮೊಮ್ಮೆ ಗೊತ್ತಾಗುವುದಿಲ್ಲ. ಕೇಂದ್ರ ಚಿಂತನೆಯೊಂದು ಬರಹಗಳ ಹಿನ್ನೆಲೆಯಲ್ಲಿ ಇಲ್ಲದಿದ್ದಾಗ ಈ ಬಗೆಯ ಗೊಂದಲಗಳು ಇರುತ್ತವೆ. ಇಲ್ಲಿ ಮಂಡಿತವಾದ ವಿಷಯಗಳು ತೀರ ಹಳತು ಎಂದು ಓದುಗರಿಗೆ ಅನಿಸುವುದಕ್ಕೆ ಅವುಗಳ ಸಾಮಾನ್ಯತೆಯೂ ಒಂದು ಕಾರಣವಾಗಿದೆ.

ಈ ಲೇಖನಗಳಲ್ಲಿ ಅಕೆಡೆಮಿಕ್ ಅಧ್ಯಯನದ ಒಣ ವಿವರಣಾತ್ಮಕತೆ ಮಾಹಿತಿಗಳನ್ನು ಒಂದೆಡೆ ತಂದು ಒಟ್ಟುವಿಕೆ ಇದೆ. ಜೊತೆಗೆ ನಮ್ಮ ಶೈಕ್ಷಣಿಕ ಪುಸ್ತಕಗಳ ನಿರೂಪಣೆ ಕೂಡ. ಅಕೆಡೆಮಿಕ್ ಆದ ಅಧ್ಯಯನ ಈಗಾಗಲೇ ಸಿದ್ಧವಾಗಿರುವ ಜ್ಞಾನವನ್ನು, ಮೂಲ ಮಾದರಿಗಳನ್ನು ಚೌಕಟ್ಟುಗಳನ್ನು ಉಲ್ಲಂಘಿಸದಂಥವು. ಹಾಗಾಗಿ ಅವು ಹೆಚ್ಚಿನದೇನನ್ನೂ ಹೇಳಲು ಹೋಗುವ ತೊಂದರೆ ತೆಗೆದುಕೊಳ್ಳುವುದಿಲ್ಲ. ಇಂಥ ಬರಹಗಳಿಂದ ಅದನ್ನು ನಿರೀಕ್ಷಿಸುವಂತೆಯೂ ಇಲ್ಲ. ಈ ಲೇಖನಗಳ ಸಂದರ್ಭದಲ್ಲಿ ಆಗಿದ್ದು ಇದೇ. ಜೊತೆಗೆ ಹಿಂದಿನ ಚಿಂತನೆಗಳಿಗೆ ಹೊಸತನ್ನು ಲೇಖಕರು ಸೇರಿಸುತ್ತಿದ್ದಾರೆ ಎಂದು ಲೇಖನಗಳನ್ನು ಓದಿದಾಗ ಅನ್ನಿಸುವುದಿಲ್ಲ.

''ಗುಮ್ಮನ ಕರೆಯದಿರೆ'' ಎಂಬ ಲೇಖನದಲ್ಲಿ ಯಾವುದು ಪ್ರತಿಷ್ಠೆ, ಯಾವುದು ಶ್ರೇಷ್ಠತೆ ಎಂಬ ತೀರ್ಮಾನಕ್ಕೆ ಬರಲು ಲೇಖಕರು ಸಾಕಷ್ಟು ಹೆಣಗಿದ್ದಾರೆ. ಗಟ್ಟಿಧ್ವನಿ ಅಗತ್ಯವಿದೆ ಎಂಬ ಲೇಖನದಲ್ಲಿ 'ಪ್ರಜಾಪ್ರಭುತ್ವವನ್ನು ಸನ್ನಿವೇಶ ನಿರ್ಮಿತವೆನ್ನಬಹುದೇ ಹೊರತು ಜನರ ಅಂತರಂಗದ ತುಡಿತದ ನಿರ್ಮಾಣವೆನ್ನಲಾಗದು' ಎನ್ನುವ ಲೇಖಕರು ಪ್ರಜಾಪ್ರಭುತ್ವ ಸ್ವಾತಂತ್ರ್ಯ ಸಿಕ್ಕ ಸಂದರ್ಭದ ಅಗತ್ಯವಾಗಿತ್ತು ಎಂಬುದನ್ನು ಮರೆಯುತ್ತಾರೆ. ಇದಕ್ಕೆ ಅವರು ಕೊಡುವ ಕಾರಣ 'ಪ್ರಜಾಪ್ರಭುತ್ವಕ್ಕಾಗಿ ನಾವು ಹೋರಾಡಿಲ್ಲ (ಪುಟ 34) ಹಾಗಿದ್ದರೆ ಆ ಸಂದರ್ಭದಲ್ಲಿ ನಾವು ಯಾವ ರಾಜಕೀಯ ಪದ್ಧತಿಯನ್ನು ಆಯ್ಕೆ ಮಾಡಿಕೊಳ್ಳಬಹುದಿತ್ತು? ಪ್ರಜಾಪ್ರಭುತ್ವ ಆ ಹೊತ್ತಿನ ಅನಿವಾರ್ಯವಾದ ಸಹಜ ಆಯ್ಕೆಯಾಗಿತ್ತು ಎಂಬುದನ್ನು ನಾವು ಮರೆಯದಿರೋಣ. ಮಾಹಿತಿಗಳು ಕೇವಲ ಮೇಲು ಮೇಲಿನ ವಿವರನ್ನು ಒದಗಿಸುತ್ತವೆಯೇ ಹೊರತು ತಿಳುವಳಿಕೆಯನ್ನಲ್ಲ. ಹಾಗಾಗಿ ವಿಸ್ತಾರವಾದ ಓದಿನ ಹಿನ್ನಲೆಯಿರುವ ಶ್ರೀಯುತರು ಮಾಹಿತಿಗಳನ್ನು ಕಲೆ ಹಾಕುವುದಷ್ಟಕ್ಕೆ ಸೀಮಿತವಾಗದೆ ಹೊಸ ಚಿಂತನ ಕ್ರಮಗಳನ್ನು ಅಳವಡಿಸಿಕೊಳ್ಳಲು ಪ್ರಯತ್ನಿಸಬಹುದು. ತಮ್ಮ ಮಾನವಿಕಶಾಸ್ತ್ರಗಳ ಓದನ್ನು ತಮ್ಮ ಚಿಂತನೆಯನ್ನು ಕರಗಿಸುವ, ಒಂದಕ್ಕೊಂದನ್ನು ಬೆಸೆಯುವ ಕೆಲಸವನ್ನು ಮಾಡಿದರೆ ಅವರಿಗೆ ಹೊಸ ಬಗೆಯ ಬರಹಗಳನ್ನು ಕೊಡಲು ಸಾಧ್ಯವಿದೆ. ❑

**ನೆಲದ ಮರೆಯ ನಿಧಾನ**
ಲೇಖಕ: ಟಿ.ಜಿ. ಭಟ್ಟ, ಹಾಸಣಗಿ
ಬೆಲೆ: 40/-
ಪ್ರಕಾಶನ: ಆದಿತ್ಯ ಪ್ರಕಾಶನ.




ಕವಿ ಟಿ.ಜಿ. ಭಟ್ಟ, ಹಾಸಣಗಿಯವರ ಬರಹಗಳ ಸಂಗ್ರಹ 'ನೆಲದ ಮರೆಯ ವಿಧಾನ' ಸಾಹಿತ್ಯ ವಿಚಾರ ಮತ್ತು ತಾಂತ್ರಿಕ ಚಿಂತನೆಗಳ ನಿರೂಪಣೆಯನ್ನು ಒಳಗೊಂಡ ಪುಸ್ತಕವಾಗಿದೆ.

ಯಾವುದು ಸೃಜನ? ಯಾವುದು ಸೃಜನೇತರ? 'ಕಾವ್ಯದ ಚೌಕಟ್ಟು', 'ಕವಿತೆಯ ಮನಸ್ಸು', 'ಪ್ರಕೃತಿಯ ಸರ್ವಶ್ರೇಷ್ಠ ಕೃತಿ: ಮನುಷ್ಯ? 'ರೂಪ ಮತ್ತು ಸತ್ವ' ಮುಂತಾದ ವಿಷಯಗಳ ಕುರಿತಂತೆ ಮೂರು ಭಾಗಗಳಲ್ಲಿ ಸರಳವಾಗಿ ಈ ಪುಸ್ತಕದಲ್ಲಿ ಚರ್ಚಿಸಲಾಗಿದೆ. ಲೇಖನಗಳಿಗೆ ಹಾಕಿಕೊಂಡ ಚೌಕಟ್ಟುಗಳನ್ನು ಮೀರದಂತೆ ಲೇಖಕರು ಇಲ್ಲಿ ಬರೆದಿದ್ದಾರೆ. ಇಲ್ಲಿನ ಬಹುಪಾಲು ವಿವರಗಳು ತಮ್ಮ ವಿಸ್ತಾರವಾದ ಓದಿನಿಂದ ಲೇಖಕರು ಪಡೆದುಕೊಂಡದ್ದು ಎಂಬುದನ್ನು ನಾವು ಗಮನಿಸಬಹುದು.

ಪುಸ್ತಕದ ಮೊದಲ ಭಾಗದ ಲೇಖನಗಳಲ್ಲಿನ ಸಾಹಿತ್ಯಿಕ ಅಂಶಗಳೆಲ್ಲ ನಮ್ಮ ಸಾಹಿತ್ಯಿಕ ಚರ್ಚೆಯಲ್ಲಿ ಬಂದು ಹೋಗಿರುವಂಥದ್ದಾಗಿವೆ. ಆ ಚರ್ಚೆಗಳನ್ನು ಬೆಳೆಸುವ ಶ್ರಮವನ್ನು ಲೇಖಕರು ಇಲ್ಲಿ ತೆಗೆದುಕೊಂಡಿಲ್ಲ. ಆದರೆ 'ಬೇಂದ್ರೆಯವರ ಕವಿತೆಗಳಲ್ಲಿ ಸಂಖ್ಯೆ' ಲೇಖನ ಕುತೂಹಲಕರವಾಗಿದೆ ಮತ್ತು ಈ ಸಂಕಲನದಲ್ಲಿಯೇ ಭಿನ್ನವಾದ ಲೇಖನವಾಗಿದೆ. ಲೇಖಕರ ಈ ಪ್ರಯತ್ನ ಕೂಡ ಬೇಂದ್ರೆ, ಕಾವ್ಯದ ಬಗ್ಗೆ ವಿಶೇಷವಾದುದೇನನ್ನೂ ಹೇಳಿದಂತಿಲ್ಲ. ಲೇಖಕರೇ ಈ ಬರಹದ ಕೊನೆಯಲ್ಲಿ ಹೇಳಿದಂತೆ ''... ಬೇಂದ್ರೆಯವರ ಈ ಬಗೆಯ ಕವನಗಳ (ಸಂಖ್ಯೆಗಳು ಬಳಕೆಯಾಗಿರುವ) ಕವನಗಳ ಹೆಚ್ಚಿನ ಅಧ್ಯಯನ ಇನ್ನೂ ನಿರೀಕ್ಷಿತ ಪ್ರಮಾಣದಲ್ಲಿ ಆಗಿಯೇ ಇಲ್ಲ ಎನ್ನುವುದು ವಿಷಾದನೀಯ'' (ಪುಟ 42)

ಎರಡನೆ ಭಾಗದ 'ಗುರುವಾಗದ ಗುರು ಜೆ.ಕೃಷ್ಣಮೂರ್ತಿ ಧರ್ಮ-ರಸೆಲ್ ದೃಷ್ಟಿ ಈ ಲೇಖನಗಳಲ್ಲಿ ಈ ಚಿಂತಕರ ಚಿಂತನೆಯ ಸಂಗ್ರಹವಾಗಿ ಕೊಡಲಾಗಿದೆ. ಮೂರನೆ ಭಾಗದ ಲೇಖನಗಳು ಒಂದು ವಸ್ತು ಸಂಗತಿಯ (ದಿವ್ಯಾಗ್ನಿ, ರೂಪ ಮತ್ತು ಸತ್ವ, ಉಲ್ಲಂಘನೆ) ಕುರಿತ ವಿಶ್ಲೇಷಣಾತ್ಮಕ ಬರಹಗಳಾಗಿವೆ.

ಇಲ್ಲಿನ ಲೇಖನಗಳೆಲ್ಲ ಬೇರೆ ಬೇರೆ ಕಡೆಗಳಿಂದ ಪಡೆದುದನ್ನು 'ತಿಳಿಸುವ' ಬರಹಗಳು; 'ಅರಿಯುವ' ಬರಹಗಳಲ್ಲ. ಈ ದೃಷ್ಟಿಯಿಂದ ಪುಸ್ತಕ ಉದಯೋನ್ಮುಖ ಸಾಹಿತ್ಯ ಅಭ್ಯಾಸಿಗಳಿಗೆ ಪೂರಕ ಪಠ್ಯವಾಗಿ ಕೆಲಸ ಮಾಡುತ್ತದೆ. ಆ ಮಟ್ಟಿಗೆ ಇದನ್ನು ಉತ್ತಮ ಪುಸ್ತಕ ಎನ್ನಲು ಅಡ್ಡಿಯಿಲ್ಲ.

## ಪ್ರತಿಕ್ರಿಯೆ



÷ ಸಂಚಯ ಬಂತು, ಸಂತೋಷ, ಚೆನ್ನಾಗಿದೆ ಪತ್ರಿಕೆ, ಇಂಥದ್ದೊಂದು ಪತ್ರಿಕೆ ಇದೆ ಅಂತ ಗೊತ್ತೇ ಇರಲಿಲ್ಲ. ಹುಡುಗ ಹುಡುಗಿಯರು ಬರೆದ ವಿಮರ್ಶೆ ಚೆನ್ನಾಗಿದೆ. ಪ್ರತಿಭೆಗಳನ್ನು ಗುರುತಿಸುವ ಕೆಲಸ ಮುಂದುವರೆಯಲಿ. ಚಂದಾ ಎಂ.ಓ ಮಾಡಿದ್ದೇನೆ. ಆಜೀವ ಸದಸ್ಯತ್ವದ ಚಂದಾ ಕಳುಹಿಸಿ, ಪತ್ರಿಕೆಯೂ ಇಲ್ಲ ಚಂದಾವೂ ಇಲ್ಲ ಆಗಿದೆ (ಕೆಲವು ಪತ್ರಿಕೆಗಳಿಗೆ).

ಬಿಳುಮನೆ ರಾಮದಾಸ್, ಬೆಂಗಳೂರು

÷ ಸಂಚಯ ಈತನಕ ಹಳ್ಳಿಯ ಮೂಲೆಯಲ್ಲಿರುವ ನನ್ನ ಗಮನಕ್ಕೆ ಬರಲೇ ಇಲ್ಲ. ಒಳ್ಳೆ ಕೆಲಸ, ತುಂಬಾ ಚೆನ್ನಾಗಿ ತರುತ್ತಿದ್ದೀರಿ ನಿರ್ಲಕ್ಷಿತ ಕವಿಗಳ ಬಗ್ಗೆ ನೀವು ಪ್ರಾರಂಭಿಸಿದ 'ಸಂಕಿರಣ' ಅಭಿನಂದನಾರ್ಹ. ಝುಂಜರವಾಡ ಅವರನ್ನು ಮುದ್ದಣ ಕಾವ್ಯ ಪ್ರಶಸ್ತಿ ವರ್ಧಮಾನ ಪ್ರಶಸ್ತಿಯ ಮೂಲಕ ಗೌರವಿಸಿದ ಭಾಗ್ಯ ನನ್ನದು. ಅವರಿಗೆ ಸಂಚಯ ನಿಜವಾದ ಗೌರವನೀಡಿ ಅಭಿನಂದಿಸಿದೆ.

ಡಾ॥ ನಾ. ಮೊಗಸಾಲೆ, ಕಾಂತಾವರ, ದ.ಕ.

÷ ಆನಂದ ಝುಂಜರವಾಡರನ್ನು ಕುರಿತು ವಿಮರ್ಶೆ ಬಂದಿದ್ದೇ ಕಡಿಮೆ, ಅವರೊಬ್ಬರು ಮುಖ್ಯ ಕವಿಯೆಂದು ನಾನು ಹಿಂದಿನಿಂದಲೂ ತಿಳಿದುಕೊಂಡಿದ್ದವ. ಸಂಚಯದಲ್ಲಿ ಅವರ ಕುರಿತು ಪ್ರಕಟಿಸಿ ಒಳ್ಳೆಯ ಕೆಲಸ ಮಾಡಿದ್ದೀರಿ. ಅದೇ ರೀತಿ ಕಿ.ರಂ. ಜೊತೆಗಿನ ಹರಟೆಯಲ್ಲಿ ಅವರ ಕೆಲವು ಮಾತುಗಳು ವಿಮರ್ಶೆಗೆ ಹೊಸ ದಿಕ್ಕುಗಳನ್ನು ಕೊಡುವಂಥವು.

ಕೆ.ವಿ. ತಿರುಮಲೇಶ್, ಹೈದರಾಬಾದ್

÷ ನಿಮ್ಮ ಸಂಚಯ ತುಂಬಾ ಚೆನ್ನಾಗಿ ಬರುತ್ತಿದೆ. ಬರೆಯುತ್ತಿರುವ ಹೆಚ್ಚಿನ ಲೇಖಕರು ಯಾವುದೇ ಹೊರೆಯಿಲ್ಲದೆ ಬರೆಯುತ್ತಿದ್ದಾರೆ ಅನ್ನಿಸುತ್ತದೆ. ಗಡಿರೇಖೆಗಳೊಳಗೆ ಮಿಸುಕಾಡುವ ಭಾವ ಸಂಚಯಗಳಿಗಿಂತಾ ಸ್ಫೋಟಿಸಿದ ಹಾಗೆ ಚದುರಿ ಬಿದ್ದಿರೋದು ನನಗೆ ಬಹಳ ಸೇರುತ್ತದೆ. ಕಾಲ ಹೀಗೊಂದು ಘಟ್ಟದಲ್ಲಿರುವಾಗ ಮನಸ್ಸುಗಳು, ಮನಸ್ಸಿನ ಭಾವಕೋಶಗಳು ಅದರೊಂದಿಗೇ ಚಲಿಸುತ್ತಿರಬೇಕಲ್ಲ? ಗಡಿ ರೇಖೆಗಳೊಳಗೆ ಶಿಸ್ತಿನ ಸಿಪಾಯಿಗಳ ಹಾಗೆ ತಾಲೀಮು ಮಾಡುವ ಪಥ ಸಂಚಲನ ಮಾಡುವ ಮನಸ್ಸುಗಳು ಈ ಭಾವ ಜಗತ್ತಿನಲ್ಲಿ ಎಂದಾದರೂ ಇದ್ದುವೆ? ಹಾಗೆ ಸಾಹಿತ್ಯವಿರಬೇಕು ಕಲೆ ಇರಬೇಕು ಎಂದು ಶಾಸನ ಮಾಡುವ ಹಕ್ಕು ಸಾಹಿತಿಗಳಿಗೂ ಇರಬಾರದು ವಿಮರ್ಶಕರಿಗೂ ಇರಬಾರದು ಅಲ್ಲ?

ಎಂ. ವ್ಯಾಸ, ಕಾಸರಗೋಡು

÷ 'ಸಂಚಯ'ದಂಥ ಸಾಹಿತ್ಯಿಕ, ಸಾಂಸ್ಕೃತಿಕ ಪತ್ರಿಕೆಯೊಂದನ್ನ ಅತ್ಯಂತ ಅಚ್ಚುಕಟ್ಟಾಗಿ ನಿಯತವಾಗಿ ಹೊರತರುತ್ತಿರುವ ನಿಮ್ಮ ಸಾಹಸಕ್ಕೆ ನಿಜಕ್ಕೂ ಅಭಿನಂದನೆ ಸಲ್ಲಿಸಬೇಕು. ಪತ್ರಿಕೆಯ ಅಂತರಂಗ, ಬಹಿರಂಗಗಳೆರಡೂ ನಿಮ್ಮ ಸಾಹಿತ್ಯಿಕ ಶ್ರದ್ಧೆಗೆ ಸಾಕ್ಷಿ ಹೇಳುತ್ತವೆ. ಯುವ ಲೇಖಕರಿಗೆ ನೀವು ಕೊಡುತ್ತಿರುವ ಪ್ರೋತ್ಸಾಹ ಕನ್ನಡ ಸಾಹಿತ್ಯದ ಭವಿಷ್ಯಕ್ಕೊಂದು ಪೂರ್ವಸಿದ್ಧತೆಯಂತಿದೆ....

ಎನ್. ಶ್ರೀನಿವಾಸ ಉಡುಪ, ಬೆಂಗಳೂರು

÷ ಲೇಖಕರಿಗೆ, ಕವಿಗಳಿಗೆ ಕಮ್ಮಟ ಶಿಬಿರ ನಡೆಸುವ ಹುಚ್ಚು ಹಚ್ಚಿಕೊಂಡ ನನ್ನಂಥವನಿಗೆ ಖುಷ್‌ವಂತ ಸಿಂಗರ ಈ ಬರಹ, ಅನೇಕ ದೃಷ್ಟಿಯಿಂದ ಸಾರ್ಥಕ ಉದಾಹರಣೆ.

ಝುಂಜರವಾಡರ ಕವಿತೆಯ ಸತ್ವ ಸೌಂದರ್ಯಗಳ ಸಮೀಕ್ಷೆ ಮಾಡಿದ ನಾಲ್ವರೂ ಲೇಖಕರು ವಿಮರ್ಶೆ ಮಾಡುವುದಕ್ಕಿಂತಾ ಮಿಗಿಲಾಗಿ ತಮ್ಮ ತಮ್ಮ ರಸಾನುಭವಗಳ ಮಂಡನೆ ಮಾಡಿದ್ದಾರೆ. ಇತರ ಕವಿಗಳೊಂದಿಗೆ ಹೋಲಿಸುವ ಸಂದರ್ಭವಿದ್ದಾಗ ಮಾತ್ರ ವಿಮರ್ಶೆಯ ದೃಷ್ಟಿ ಸಾಧ್ಯವಾಗಿದೆ.... ಭೂಗೋಲಕ್ಕೆ ಕಬ್ಬಿಣದ ಮೊಳೆಗಳನ್ನು ಹೊಡೆದಂತಿರುವ ಮುಖಪುಟದ ಛಾಯಾಚಿತ್ರ ಜೀವವೊಂದರ ದೇಹಭಾಗವಾಗಿಯೂ ಕಾಣುತ್ತದೆ. ಮೊಳೆಗಳ ನೆರಳುಗಳು ನೆಲ ಕಚ್ಚಿಲ್ಲವಾದರೂ ಮೊಳೆಗಳ ಪರಿಣಾಮವನ್ನು ದುಪ್ಪಟ್ಟುಗೊಳಿಸಿವೆ. ಕವಿತೆಗೆ ವಸ್ತುವಾಗುವ ಛಾಯಾಚಿತ್ರ, ನಿಮ್ಮ ಸಾಹಿತ್ಯ ಪ್ರಯತ್ನ ಯಶಸ್ವಿಯಾಗುತ್ತಿರುವುದಕ್ಕೆ ಅಭಿನಂದನೆಗಳು.

ಶಾಮಸುಂದರ ಬಿದರಕುಂದಿ, ಗದಗ

÷ ಏನನ್ನಾದರೂ ಓದಲು ಹಿಡಿದೆವೆಂದರೆ ಅದರಲ್ಲಿ ಹೊಸತನವನ್ನೋ ಅಥವಾ ನಾವರಿಯದ ಹೊಸ ವಿಚಾರಗಳನ್ನೋ ಆರಸುತ್ತಿರುತ್ತೇವೆ. ಈ 60ನೇ ಸಂಚಿಕೆಯಲ್ಲಿ ಹರೀಶ್ ಅನುವಾದಿಸಿದ ಖುಷ್ವಂತ್ ಸಿಂಗರ ಬರಹದಲ್ಲಿ ಉದಯೋನ್ಮುಖರಿಗೆ ಅವಶ್ಯವಾದಂತಹ ಸಾಕಷ್ಟು ಹೊಸ ವಿಚಾರಗಳಿವೆ. 'ಸಂಕಿರಣದಡಿ' ಝುಂಜರವಾಡರ ಕಾವ್ಯ ವಿಶ್ಲೇಷಣೆ ಸವಿಸ್ತಾರವಾಗಿ ಒಡಮೂಡಿದ್ದು ಪತ್ರಿಕೆಯ ಹೊಸ ಹೆಜ್ಜೆಗೆ ಇಂಬು ನೀಡಿದೆ.

ಕಿ.ರಂ. ಜೊತೆಗೆ ಹರಟೆ ಇಷ್ಟವಾಯ್ತು ಇನ್ನುಳಿದ ಲೇಖನಗಳು ಹಾಗೂ ಕವಿತೆಗಳು ಸತ್ವಪೂರ್ಣವಾಗಿವೆ. ನಮ್ಮಿಬ್ಬರ ಬರವಣಿಗೆಯ ಗುಣವನ್ನು ಹೆಚ್ಚಿಸಿಕೊಳ್ಳಲು 'ಸಂಚಯದ ಓದು' ಸರಿಯಾದ ತಾಲೀಮು ನಡೆಸೀತು ಎಂದು ನಂಬಿರುವೆವು. ಈಗ ಸಂಚಯ ನಮ್ಮ ಪತ್ರಿಕೆ

ಸುನಂದಾ ಪ್ರಕಾಶ ಕಡಮೆ, ಹುಬ್ಬಳ್ಳಿ

÷ ಒಬ್ಬ ಕವಿಯ ಬಗೆಗೆ ಅದು ಯಾವುದೋ ಮೂಲೆಯಲ್ಲಿ ಅಡಗಿ, ತನ್ನ ಬದುಕಿನ ಅನುಭವಗಳನ್ನು ಬಿಟ್ಟರೆ ಬೇರೆ ಏನೂ ಬರೆಯಲು ಗತಿಯಿಲ್ಲದ ಕವಿಯ ಬಗೆಗೆ-ಹುಡುಕಿ, ಬರೆದ ಆ ಸಹೃದಯರಿಗೆ ನನ್ನ ಅನಂತ ನಮನಗಳನ್ನು ತಿಳಿಸಿ.

ಆನಂದ ಝುಂಜರವಾಡ, ಮುಧೋಳ

# ಈ 'ಸಂಚಯ'ದ ಲೇಖಕರು

✍ **ವಿಕ್ರಮ ವಿಸಾಜಿ,** ಅಧ್ಯಾಪಕ, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿ.ವಿ. ಸ್ನಾತಕೋತ್ತರ ಕೇಂದ್ರ, ನಂದಿಹಳ್ಳಿ, ಸಂಡೂರು-583 119.

✍ **ಸೂರಜ್ ಎಸ್.,** 3ನೇ ಬಿ.ಎಫ್.ಎ., ಚಿತ್ರಕಲಾ ಪರಿಷತ್ತು, ಬೆಂಗಳೂರು.

✍ **ಹೆಚ್.ಕೆ. ರಾಮಮೂರ್ತಿ,** 1024, 4ನೇ ಮುಖ್ಯ ರಸ್ತೆ, 'ಡಿ' ಬ್ಲಾಕ್, 2ನೇ ಹಂತ, ರಾಜಾಜಿನಗರ, ಬೆಂಗಳೂರು-560 010.

✍ **ಕೆ. ಸತ್ಯನಾರಾಯಣ,** 5031, ಸೆಂಟ್ರಲ್ ರೆವಿನ್ಯೂ ಕ್ವಾಟರ್ಸ್, 15ನೇ ಮೈನ್, ಅಣ್ಣಾನಗರ್, ಚೆನ್ನೈ-600 040.

✍ **ಚಿ. ಶ್ರೀನಿವಾಸರಾಜು.** 21(8), 'ಚಿರಂಜೀವಿ', ಹಳೇ ಈಜುಕೊಳ ರಸ್ತೆ, ಕೋದಂಡರಾಮಪುರ, ಬೆಂಗಳೂರು-560 003.

✍ **ಎಚ್.ಎಸ್. ಶಿವಪ್ರಕಾಶ,** ಅಸೋಸಿಯೇಟ್ ಪ್ರೊಫೆಸರ್, ಸ್ಕೂಲ್ ಆಫ್ ಆರ್ಟ್ಸ್ ಆ್ಯಂಡ್ ಈಸ್ತೆಟಿಕ್ಸ್, ಜೆ.ಎನ್.ಯೂ, ನ್ಯೂಡೆಲ್ಲಿ-110 067.

✍ **ವೆಂಕಟ್ರಮಣ ಗೌಡ,** ನಂ. 2, 2ನೇ ಕ್ರಾಸ್, ಆರ್.ಕೆ. ಸ್ಟ್ರೀಟ್, ಶೇಷಾದ್ರಿಪುರಂ, ಬೆಂಗಳೂರು-560 020.

✍ **ವಾಸುದೇವ ನಾಡಿಗ್,** ಜವಹರ್ ನವೋದಯ ವಿದ್ಯಾಲಯ, ಮಾನಾ ಕ್ಯಾಂಪ್, ರಾಯ್‌ಪುರ್-492 015. ಛತ್ತೀಸ್‌ಗಢ್.

✍ **ಸ. ಉಷಾ,** ಕನ್ನಡ ಅಧ್ಯಾಪಕಿ, ಹೊಯ್ಸಳೇಶ್ವರ ಪ್ರಥಮ ದರ್ಜೆ ಕಾಲೇಜು, ಅರಸೀಕೆರೆ, ಹಾಸನ ಜಿಲ್ಲೆ.

✍ **ಮಹಾಬಲಮೂರ್ತಿ ಕೊಡ್ಲೆಕೆರೆ,** 1010/11, 12ನೇ ಮೈನ್, ಹನುಮಂತನಗರ, ಬೆಂಗಳೂರು-560 019.

✍ **ದೇಶ ಕುಲಕರ್ಣಿ,** 192, ಸಿ.ಎಚ್.ಬಿ.ಎಸ್. ಲೇಔಟ್, ಮಾಗಡಿ ಕಾರ್ಡ್ ರಸ್ತೆ ಬೆಂಗಳೂರು-560 040.

✍ **ಎಲ್ಸಿ. ನಾಗರಾಜ,** ತೋಟದ ಮನೆ, ಸೊಂಡೇಕೊಪ್ಪ (ಅಂಚೆ), ನೆಲಮಂಗಲ ತಾ||, ಬೆಂಗಳೂರು ಗ್ರಾಮಾಂತರ ಜಿಲ್ಲೆ - 562 130.

✍ **ಬೇಲೂರು ಸುದರ್ಶನ,** 20, ಶ್ರೀನಿಕೇತನ, ಎಸ್.ಬಿ.ಐ. ಆಫೀಸರ್ಸ್ ಕಾಲೋನಿ, ಬಸವೇಶ್ವರ ನಗರ, ಬೆಂಗಳೂರು-560 079.

✍ **ಸಂದೀಪ ನಾಯ್ಕ,** ಗೋಖಲೆ ಸೆಂಟಿನರಿ ಕಾಲೇಜು ಹತ್ತಿರ, ವಂದಿಗೆ ಅಂಚೆ, ಅಂಕೋಲಾ-581 314. ಉ.ಕ.

✍ **ಜಿ.ಕೆ. ರವೀಂದ್ರ ಕುಮಾರ,** ಕಾರ್ಯಕ್ರಮ ನಿರ್ವಾಹಕರು, ಆಕಾಶವಾಣಿ, ಯಾದವಗಿರಿ, ಮೈಸೂರು-570 020.

# ಸಂಚಯದ ಪ್ರಕಟಣೆಗಳು




| | | | |
|---|---|---|---|
| 1) | ಗಾಜು (ಕವಿತೆಗಳು) | ವಿವಿಧ ಕವಿಗಳು | ರೂ. 8-00* |
| 2) | ಎ.ಕೆ. ರಾಮಾನುಜನ್ ಹೆಜ್ಜೆ ಗುರುತು | ವಿವಿಧ ಲೇಖಕರು | ರೂ. 1500* |
| 3) | ಸಿಕಾಡ (ಕವನ ಸಂಕಲನ) | ಜಿ. ಕೆ. ರವೀಂದ್ರಕುಮಾರ್ | ರೂ. 35-00 |
| 4) | ಡ್ರೀಮರ್ (ಕವಿತೆಗಳು) | ಡಿ. ವಿ. ಪ್ರಹ್ಲಾದ್ | ರೂ. 18-00 |
| 5) | ಅಭಿಮುಖ (ಲೇಖನಗಳು) | ಎನ್.ಎಸ್. ಶ್ರೀಧರಮೂರ್ತಿ | ರೂ. 20-00 |
| 6) | ಬಗೆ ತೆರೆದ ಬಾನು (ಸಾಹಿತಿಗಳ ಸಂದರ್ಶನಗಳು) | ಸಂ. ಡಿ. ವಿ. ಪ್ರಹ್ಲಾದ್ | ರೂ. 60-00 |
| 7) | ಚೌಕಟ್ಟು (ಸಮಕಾಲೀನ ದೃಶ್ಯಕಲೆ ಕುರಿತು) | ಸಂ. ಎಚ್.ಎ.ಅನಿಲ್‌ಕುಮಾರ್ | ರೂ. 25-00 |
| 8) | ಮೌನದ ಹೊತ್ತು (ಅನುವಾದಿತ ಕವಿತೆಗಳು) | ಸು. ರಂ. ಎಕ್ಕುಂಡಿ | ರೂ. 20-00 |
| 9) | ಕನಸು ಕೋಳಿಯ ಕತ್ತು (ಕವನಗಳು) | ಗೋವಿಂದ ಹೆಗಡೆ | ರೂ. 30-00 |
| 10) | ನಾಟಕ ಅಂತರಂಗ | ಎ.ಆರ್. ನಾಗಭೂಷಣ | ರೂ. 40-00 |
| 11) | ಮುಕ್ತ ಚಂದ | ಶಾಂತಿನಾಥ ದೇಸಾಯಿ ನೆನಪಿನ ಸಂಪುಟ | ರೂ. 85-00 |
| 12) | ಕಂಬಾರರ ನಾಟಕಗಳು | ಸಂ. ವಿಕ್ರಮ ವಿಸಾಜಿ | ರೂ. 45-00 |
| 13) | ಅವಧೂತನೊಬ್ಬನ ರೂಪಾಂತರ | ಕಥಾ ಸಂಕಲನ | ರೂ. 30-00 |
| 14) | ಮರೆತ ಮಾತು (ಕವಿತೆಗಳು) | ಡಿ.ಎಸ್. ರಾಮಸ್ವಾಮಿ | ರೂ. 45-00 |
| 15) | ಎರಡು ಏಕಾಂಕಗಳು | ಚಿ. ಶ್ರೀನಿವಾಸರಾಜು | ರೂ. 20-00 |


























*ಪ್ರತಿಗಳು ಮುಗಿದಿವೆ.



ಶಿವ ತಾಂಡವ; ಕಲಾವಿದ - ತಿಪ್ಪಾಜಪ್ಪ(1780-1856); ಕೃಪೆ : ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಪ್ರಕಟಣೆ

